ಮರೆಯಲಾಗದ ಬರಹಗಾರರ ಮಾಲೆ

# ಹಟ್ಟಿಯಂಗಡಿ ನಾರಾಯಣರಾವ್

## ಸಾಹಿತ್ಯ ವಾಚಿಕೆ

ಸಂಪಾದಕರು :

ಶ್ರೀನಿವಾಸ ಹಾವನೂರ



ಕನ್ನಡ ಸಾಹಿತ್ಯ ಅಕಾಡೆಮಿ

ನೃಪತುಂಗ ರಸ್ತೆ, ಬೆಂಗಳೂರು-೫೬೦ ೦೦೨

**HATTIYANGADI NARAYANARAO SAHITYA VACHIKE -**
Edited by : **Srinivasa Havnur**
Published by Karnataka Sahitya Academy
Nrupathunga Road, Bangalore-560 002

First Publication 1994    Pages/ಪುಟಗಳು : 18+128
ಮೊದಲ ಮುದ್ರಣ ೧೯೯೪



ಮೊದಲ ಮುದ್ರಣ : ೧೯೯೩

ಪ್ರಧಾನ ಸಂಪಾದಕರು :
ಬರಗೂರು ರಾಮಚಂದ್ರಪ್ಪ
ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು-೫೬೦ ೦೦೨.

ರಕ್ಷಾಪುಟ ವಿನ್ಯಾಸ : ಸಿ. ಚಂದ್ರಶೇಖರ್

ಬೆಲೆ : 12-00

ಮುದ್ರಕರು :
ಮಾ ಪ್ರಿಂಟರ್ಸ್
ಪಟ್ಟೇಗಾರಪಾಳ್ಯ, ಬೆಂಗಳೂರು-560 079
Ph. : 3305392

# ಅಧ್ಯಕ್ಷರ ಮಾತು

ಕನ್ನಡ ಸಾಹಿತ್ಯ ಪರಂಪರೆಯ ನಿರ್ಮಾಣ ಮತ್ತು ವಿಸ್ತರಣೆಯ ದಿಕ್ಕಿನಲ್ಲಿ ತಮ್ಮ ಅಮೂಲ್ಯ ಸೃಷ್ಟಿಶೀಲತೆಯ ಮೂಲಕ ಪ್ರಮುಖ ಪಾತ್ರ ವಹಿಸಿದ ಅನೇಕ ಹೆಸರಾಂತ ಸಾಹಿತಿಗಳನ್ನು ಉಲ್ಲೇಖಿಸಬಹುದು. ಈಗಾಗಲೇ ಓದುಗ ಮತ್ತು ವಿಮರ್ಶಕರ ನಾಲಗೆಯಲ್ಲಿ ನೆಲೆಯೂರಿದ ಹೆಸರಾಂತರಲ್ಲದೆ ಮರೆವಿನ ಅಂಚಿನಲ್ಲಿರುವ ಅಸಾಧಾರಣ ಪ್ರತಿಭಾವಂತರು ಕನ್ನಡ ಸಾಹಿತ್ಯ ಪರಂಪರೆಯ ಪ್ರಮುಖ ಭಾಗವಾಗಿದ್ದಾರೆಂದು ಜ್ಞಾಪಿಸುವುದು ಅಗತ್ಯವೆನ್ನಿಸಿದೆ. ಇದರಿಂದ ಸಾಹಿತ್ಯ ಪರಂಪರೆಯಲ್ಲಿ ಕಳಚಿ ಹೋಗುತ್ತಿರುವ ಕೊಂಡಿಗಳನ್ನು ಪುನರ್ ಜೋಡಿಸುವ ಪ್ರಕ್ರಿಯೆಗೆ ಚಾಲನೆ ಸಿಗುತ್ತದೆ. ಈ ಚಾಲನೆಯ ಕೆಲಸ ವಿಮರ್ಶೆಯಿಂದ ಮಾತ್ರವಲ್ಲ, ಮೂಲ ಕೃತಿಗಳನ್ನು ಮತ್ತೆ ಓದುಗನ ಕೈಗೆ ಕೊಟ್ಟು ನೆನಪನ್ನು ಜೀವಂತವಾಗಿಡುವುದರಿಂದಲೂ ಸಾಧ್ಯ. ಮೂಲಕೃತಿ ಮತ್ತು ವಿಮರ್ಶೆ ಒಟ್ಟೊಟ್ಟಿಗೆ ಕೈ ಸೇರಿದಾಗ 'ಸಹೃದಯ'ನಿಗೆ ಸಾಹಿತ್ಯ ಪರಂಪರೆಯ ನಿಜ ಪರಿಚಯ ಮತ್ತು ಓದಿನ ವಿಸ್ತರಣೆಯ ಸಾಧ್ಯತೆಗಳು ಸಹಜವಾಗಿ ತೆರೆದುಕೊಳ್ಳಲು ಮತ್ತಷ್ಟು ಸಹಾಯಕವಾಗುತ್ತದೆ.

ಇಂಥ ಸದಾಶಯದ ಹಿನ್ನೆಲೆಯಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು, 'ಪರಂಪರೆಯ ದೃಷ್ಟಿಯಿಂದ ಮಹತ್ವದ ಪಾತ್ರವಹಿಸಿ ಮರೆವಿನ ಅಂಚಿಗೆ ಸರಿಯುತ್ತಿರುವ ಪ್ರತಿಭಾಶಾಲಿಗಳ 'ಸಾಹಿತ್ಯವಾಚಿಕೆ'ಗಳನ್ನು ಪ್ರಕಟಿಸಲು ನಿರ್ಧರಿಸಿದೆ. ಪ್ರತಿಯೊಂದು ವಾಚಿಕೆಗೂ ಒಬ್ಬೊಬ್ಬರು ಸಂಪಾದಕರಿರುತ್ತಾರೆ.

ಈ ವಾಚಿಕೆಗಳು ಸಂಬಂಧಿಸಿದ ಬರಹಗಾರರ ಕತೆ, ಕವಿತೆ, ವಿಮರ್ಶೆ, ಪ್ರಬಂಧ ಇತ್ಯಾದಿ ಪ್ರಕಾರಗಳ ಅತ್ಯುತ್ತಮ ರಚನೆಗಳನ್ನು ಒಳಗೊಂಡಿರುತ್ತವೆ. ಒಬ್ಬನೇ ಬರಹಗಾರ ವಿವಿಧ ಪ್ರಕಾರಗಳಲ್ಲಿ ಉಪಯುಕ್ತ ಕೆಲಸ ಮಾಡಿದ್ದರೆ

ಅಂಥ ಎಲ್ಲ ಪ್ರಕಾರಗಳಿಂದ ಆಯ್ದ ಅತ್ಯುತ್ತಮ ರಚನೆಗಳು ಒಂದೇ ಪುಸ್ತಕದಲ್ಲಿ ಸಂಕಲಿತವಾಗುತ್ತವೆ. ಕತೆ, ಕವಿತೆ. ವಿಮರ್ಶೆ, ಪ್ರಬಂಧ-ಇಂಥ ಪ್ರಕಾರಗಳ ಜೊತೆಗೆ ನಿಜಕ್ಕೂ ಪರಂಪರೆಯನ್ನು ಬೆಳೆಸುವಂಥ ಕಾದಂಬರಿ ಅಥವಾ ನಾಟಕಗಳನ್ನೂ ಬರೆದ ಬರಹಗಾರರಿದ್ದರೆ, ಅಂಥ ಕಾದಂಬರಿ ಅಥವಾ ನಾಟಕಗಳಿಂದ ಅತ್ಯುತ್ತಮ ಭಾಗವನ್ನು ಆಯ್ಕೆ ಮಾಡಿ ವಾಚಿಕೆಯಲ್ಲಿ ಸೇರಿಸಲಾಗುತ್ತದೆ. ಹೀಗೆ ಆಯ್ಕೆಗೊಂಡ ಕಾದಂಬರಿ ಅಥವಾ ನಾಟಕದ ಅತ್ಯುತ್ತಮ ಭಾಗಕ್ಕೆ ಬೇಕಾದ ಹಿನ್ನೆಲೆಯ ವಿವರಗಳನ್ನು ವಾಚಿಕೆಯಲ್ಲೇ ಒದಗಿಸಲಾಗುವುದು. ಬರಹಗಾರರ ಸ್ವಂತ ರಚನೆಗಳೊಂದಿಗೆ, ಪ್ರಾರಂಭದಲ್ಲಿ ಸಂಪಾದಕರ ಒಂದು ಪ್ರಸ್ತಾವನೆಯಿರುತ್ತದೆ.

ಈ ಮಾಲಿಕೆಯ ಎಲ್ಲ ಸಂಪಾದಕರಿಗೆ ಆಯಾ ಲೇಖಕರ ರಚನೆಗಳನ್ನು ಬಳಸಿಕೊಳ್ಳಲು ಅನುಮತಿ ನೀಡಿದ ಸಹೃದಯಿಗಳಿಗೆ ಮತ್ತು ಸಹಕರಿಸಿದ ಸರ್ವರಿಗೂ ಕೃತಜ್ಞತೆಗಳು.

-ಬರಗೂರುರಾಮಚಂದ್ರಪ್ಪ

# ಪರಿವಿಡಿ

# ೧ ಕನ್ನಡ ಕವಿತೆಯ ಭವಿತವ್ಯ

(ಕ್ರಿ.ಶ ೧೯೧೮ರಲ್ಲಿ ಧಾರವಾಡದಲ್ಲಿ ನೆರೆದ ಕರ್ನಾಟಕ ಸಾಹಿತ್ಯ ಸಮ್ಮೇಳನದಲ್ಲಿ ಓದಲೆಂದು ಹ.ಸಾ. 'ಕನ್ನಡ ಕವಿತೆಯ ಭವಿತವ್ಯ' ಎಂಬ ಹೆಸರಿನ ' ಉಪನ್ಯಾಸ' ವನ್ನು ಕಳುಹಿಸಿದ್ದರು. ಅದರ ಮುದ್ರಿತ ರೂಪವಾಗಲಿ ಹಸ್ತಪ್ರತಿಯಾಗಲಿ ಲಭ್ಯವಿಲ್ಲ. ಆದರೆ ಕ.ಸಾ.ಪ.ದ ಏಪ್ರಿಲ್ - ಜುಲೈ ೧೯೧೮ರ ಸಂಚಿಕೆಯಲ್ಲಿ ವರದಿಯಾದ ಪ್ರಕಾರ ಆ ಪ್ರಬಂಧದಲ್ಲಿ ಈ ಕೆಳಗಿನ ವಿಚಾರಗಳನ್ನು ಮಂಡಿಸಲಾಗಿದ್ದಿತು.

--'ಇಂಗ್ಲಿಷ್ ಮಾರ್ಗಗಳ ಅನುಸರಣದಿಂದ ಇನ್ನು ಮುಂದೆ ಕನ್ನಡ ಕಾವ್ಯಗಳ ಪ್ರಸಂಗ, ರಚನೆ, ಅಲಂಕಾರ -- ಇವು ಬದಲಾಗುವವು.

-- ಕವಿಗಳು ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರಿಕ, ಸಾಮಾಜಿಕ ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನಕೊಡುವರು.

-- ದೀರ್ಘ ಪುರಾಣಗಳ ಬದಲಾಗಿ ಲಘು ಕೃತಿಗಳನ್ನು ರಚಿಸುವರು.

-- ಛಂದಸ್ಸಿನಲ್ಲಿ ಹೊಸ ಮಾದರಿಗಳನ್ನು ಕಲ್ಪಿಸುವರು.

-- ಅಲಂಕಾರದಲ್ಲಿ ಅಚೇತನ ಪದಾರ್ಥಗಳಿಗೆ ವಾಕ್‌ಶಕ್ತಿಯನ್ನೂ ಮಾನಸಿಕ ಭಾವಗಳಿಗೆ ಮೂರ್ತಿತ್ವವನ್ನೂ ಆರೋಪಿಸುವ ಉತ್ಪ್ರೇಕ್ಷೆ ರೂಢಿಯಾಗಬಹುದು.

ಈ ಅಂಶಗಳಿಗೆ ಉದಾಹರಣೆಯಾಗಿ ಮಿಲ್ಟನ್ ಮತ್ತು ಶೆಲ್ಲಿ ಇವರ ಕಾವ್ಯಗಳಿಂದ ಕೆಲವು ಭಾಗಗಳನ್ನು ಅನುವಾದಿಸಿ ಕೊಟ್ಟಿದ್ದರು. ನವೋದಯ ಕಾವ್ಯ ಯಾವ ರೀತಿಯಲ್ಲಿ ಇರಬೇಕು ಎಂಬುದಾಗಿ ಚಿಂತಿಸಿ ಅದಕ್ಕೆ ಮಾದರಿಯನ್ನು ಕೊಟ್ಟು ಹೊಸಗನ್ನಡ ಕವಿತೆಗೆ ಅಸ್ತಿವಾರವನ್ನು ಹಾಕುವಲ್ಲಿ ಮೊದಲಿಗರಲ್ಲಿ ಒಬ್ಬರಾದದ್ದಕ್ಕೆ ಈ ಲೇಖನದಲ್ಲಿ ಸ್ಪಷ್ಟ ನಿದರ್ಶನವಿದ್ದಿತು. ದುರ್ದೈವಕ್ಕೆ ಈ ಲೇಖನ ಲಭ್ಯವಿಲ್ಲ.--ಸಂ)

## ೨ ಕವಿತಾವರ್ಧನ

ಈಗಿನ ಶಿಕ್ಷಿತ ಕರ್ಣಾಟಕರು ತಮ್ಮ ಭಾಷೆಯ ಕಾವ್ಯಗಳನ್ನು ಅಭಿಮಾನದಿಂದ ಪಠಿಸಬೇಕಲ್ಲದೆ ಅಭಿರುಚಿಯಿಂದ ಓದುವುದಿಲ್ಲವೆಂದು ಅನೇಕರ ಅಭಿಪ್ರಾಯವಿದೆ. ಇದು ಅಸತ್ಯವೆಂದು ನಾನು ಪ್ರತಿಪಾದಿಸಲಾರೆ. ಪಾಶ್ಚಾತ್ಯರ ಗ್ರಂಥಗಳನ್ನು ಆದಷ್ಟು ಕಡಿಮೆಯಾಗಿ ಓದಿ ಕನ್ನಡ ಗ್ರಂಥಗಳನ್ನೇ ಹೆಚ್ಚಾಗಿ ಓದುವುದು ಇದಕ್ಕೆ ಔಷಧವೆಂದು ಉಪದೇಶಿಸಿದರೆ ನಗುವರು. ಎರಡರಲ್ಲೂ ಒಂದೇ ಪ್ರಕಾರದ ಪಕ್ಷಪಾತವಿಡಬೇಕೆಂದು ಸೂಚಿಸಿದರೆ ಅನೇಕರು ಅಸಾಧ್ಯವೆನ್ನಬಹುದು. ಭಾಷೆಯಲ್ಲಿ ಹಲವು ಬಗೆಗಳನ್ನು ಕಿವಿ ಸಹಿಸಲಾರದಿದ್ದರೆ ಕವಿತಾಗುಣಗ್ರಹಣಕ್ಕೆ ಎದೆ ಕವಲ್ಗೊಂಡು ನಿಲ್ಲಲು ಸಮ್ಮತಿಸುವುದೇ? ಕವಿತೆಯೆಂದರೇನು? ಕನ್ನಡ ಕವಿತೆಗಳಲ್ಲಿ ಯಾವ ದೋಷಗಳಿಗೆ ಅಸಂತುಷ್ಟರಾಗುವರು? ಪಾಶ್ಚಾತ್ಯರ ಕಾವ್ಯಗಳಲ್ಲಿ ಯಾವ ಗುಣಗಳಿಗೆ ಮೆಚ್ಚುವರು?

ರಮಣೀಯಾರ್ಥದ ಕೃತಿಗೆ ಕಾವ್ಯವೆನ್ನಬಹುದು. ರಮಣೀಯತೆಗೆ ಅಲಂಕಾರಗಳೂ ರಸಗಳೂ ಸಾಧನವೆನ್ನುವರು. ಗಣಿತ, ವೈದ್ಯ, ವ್ಯಾಕರಣ ಮುಂತಾದ ಶಾಸ್ತ್ರಗಳನ್ನು ಪಾಶ್ಚಾತ್ಯರು ಪದ್ಯರೂಪವಾಗಿ ಬರೆಯರು; ಅವುಗಳಲ್ಲಿ ರಸಾಲಂಕಾರಗಳಿಗೆ ಅವಕಾಶವಿಲ್ಲ. ಮುದ್ರಾಯಂತ್ರಗಳಿಲ್ಲದ ದಿವಸಗಳಲ್ಲಿ ನಿಘಂಟುಗಳನ್ನೂ ಕೂಡ ಪದ್ಯಾತ್ಮಕವಾಗಿ ರಚಿಸುವ ಪದ್ಧತಿ ಹುಟ್ಟಿತು. ಅಂತಹ ಗ್ರಂಥಗಳಿಗೆ ಉಪಚಾರ ಭಾವದಿಂದ ಕಾವ್ಯವೆಂದರೂ ಅವು ಈಗ ಆವಶ್ಯಕವಲ್ಲ. ರಸಾಲಂಕಾರಗಳಿಲ್ಲದೆ ಕೇವಲ ನೀತಿಯನ್ನು ಉಪದೇಶಿಸುವ ಗ್ರಂಥಗಳಿಗೂ ಕಾವ್ಯವೆನ್ನಲು ಈಗಿನ ಗುಣವಿಮರ್ಶಕರು ಒಪ್ಪುವುದಿಲ್ಲ.

ಛಂದಸ್ಸಿನಿಂದ ಗದ್ಯಕ್ಕಿಂತ ಪದ್ಯರಚನೆ ಚೆಂದವಾಗಿ ಶೋಭಿಸುವುದು. ಪ್ರಾಸವಿಲ್ಲದೆ ಪದ್ಯಗಳನ್ನು ಏಕೆ ರಚಿಸಬಾರದು ಎಂದು ಕೆಲವರು ಕೇಳುತ್ತಾರೆ. ಏಕೆ ಕೂಡದು? ಸೀರೆಗೆ ಸೆರಗಿಲ್ಲದಿದ್ದರೇನು? ಹಣೆಗೆ ಬೊಟ್ಟಿಲ್ಲದಿದ್ದರೇನು? ಒಂದು ರಾಗದಲ್ಲಿ ವಾದಿ ಮತ್ತು ಸಂವಾದಿ ಎಂಬೆರಡು ಪ್ರಧಾನಸ್ವರಗಳಿರಬೇಕಂತೆ. ಅವುಗಳನ್ನು ಪದೇ ಪದೇ ತೋರಿಸಿದರೆ ರಾಗವು ಸ್ಪಷ್ಟವಾಗಿಯೂ ಸುಂದರವಾಗಿಯೂ ಕಾಣುವುದೆಂದು ಸಂಗೀತಜ್ಞರು

ಹೇಳುವರು. ಈ ನಿಯಮವನ್ನು ಉಲಂಘಿಸಿದರೆ ಸಂಗೀತವೇ ಅಳಿದುಹೋಗದು. ಅಷ್ಟೇಕೆ ಈ ಮಾರ್ಯಾದೆಗೆ ಉತ್ತರದಲ್ಲಿರುವ ಪ್ರಾಮುಖ್ಯವು ದಕ್ಷಿಣದಲ್ಲಿಲ್ಲವಂತೆ .

ಕನ್ನಡಕ್ಕೆ " ಸತತಂ ಪ್ರಾಸಂ" ಎಂದು ನೃಪತುಂಗನು ಬರೆದಿರುವನು. ಈ ಪದ್ಧತಿ ಎಷ್ಟು ಹಳೆಯದೆಂದು ಹೇಳಕೊಡದು. ಸಾಂಗತ್ಯದಲ್ಲಿ ನಾಗವರ್ಮನು ವರ್ಣಿಸಿದ ಅಕ್ಷರಮಾತ್ರಾಗಣಗಳ ಕ್ರಮವನ್ನು ಕಿತ್ತು ಹಾಕಿದರೂ ಪ್ರಾಸವನ್ನು ಬಿಟ್ಟುಬಿಡಲಿಲ್ಲ. ಪ್ರಾಸಕ್ಕೆ ಕನ್ನಡಿಗರು ಇಷ್ಟು ಮರುಳಾದುದಕ್ಕೆ ಕಾರಣವಿಲ್ಲದಿರಬಹುದೇ? ಅನುಭವಕ್ಕೆ ಕಂಡು ಬರುವುದೇನು? (೧) ಪ್ರಾಸಕ್ಕಿಂತಲೂ ಅಕ್ಷರಗಣಾನುಸರಣವೇ ಕಠಿನ. ಒಂದು ಷಟ್ಪದಿಯಲ್ಲಿ ಆರು ಸ್ಥಳಗಳ ಒಂದಕ್ಷರವನ್ನು ಇಟ್ಟರೆ ಸಾಕು. ಒಂದು ಅಕ್ಷರಗಣಗಳ ವೃತ್ತದಲ್ಲಿ ಗುರುಲಘುಗಳನ್ನು ಎಷ್ಟು ನಿರ್ದಿಷ್ಟ ಸ್ಥಾನಗಳಲ್ಲಿಡಬೇಕು? ಇಷ್ಟು ಪ್ರಯಾಸಪಟ್ಟರೂ ಕನ್ನಡದ ತಾಳಗಳಿಗೆ ಸರಿಯಾಗಿ ಎಷ್ಟು ವೃತ್ತಗಳನ್ನು ಹಾಡಬಹುದು? (೨) ಲೋಕಪ್ರಿಯವಾದ ಕವಿತೆಗಳನ್ನು ತಾಳಹಾಕಿ ಹಾಡಲಾಗುವಂತೆ ರಚಿಸುವುದು ಉಚಿತವಾದುದರಿಂದ ಅವುಗಳಲ್ಲಿ ವಾದಿಸ್ವರದಂತೆ ಕೇಳಿಸುವ ಪ್ರಾಸವನ್ನು ಕಾಪಾಡುವುದು ಉಪಯುಕ್ತ ಪದ್ಧತಿ. (೩) ಅರ್ಥಕ್ಕೆ ತೇಜವಿಲ್ಲದೆಡೆಗಳಲ್ಲಿ ಆ ಕುಂದುಕವನ್ನು ಪ್ರಾಸದಿಂದ ಅಡಗಿಸಿದಷ್ಟು ಸುಲಭವಾಗಿ ಬೇರೆ ಶಬ್ದಾಲಂಕಾರಗಳಿಂದಾಗದು.

ವಾದಿಸ್ವರವನ್ನು ಇಂತಹ ಸ್ಥಾನದಲ್ಲಿಡಬೇಕೆಂದು ನಿಯಮವಿಲ್ಲ. ಆದರೆ ಚರಣದ ಬುಡಕ್ಕೂ ಕೊನೆಗೂ ಆದಷ್ಟು ಸಮೀಪವಿದ್ದರೆ ಉತ್ತಮವಂತೆ. ಆಡುವುದರಲ್ಲಿಯೂ ಹಾಡುವುದರಲ್ಲಿಯೂ ಒಂದೊಂದು ದೇಶದವರಿಗೆ ಒಂದೊಂದು ರೀತಿ ಚಲೋದಾಗಿ ಕಾಣಿಸುವುದು. ಎಸ್ಸೋಸಿಯೇಶನ್ ಎಂದು ಉಚ್ಚರಿಸುವಾಗ ತಮಿಳರು ಮೊದಲಿನ ಎಕಾರವನ್ನೂ ಬಂಗಾಳಿಗಳು ಎರಡನೆಯ ಏಕಾರವನ್ನೂ ಹ್ರಸ್ವ ಮಾಡಿ ಒತ್ತುವರು. ಹಾಡುವುದರಲ್ಲಿ ಇಂತಹ ವಿವಿಧ ಪ್ರಾವಣ್ಯಗಳು ಇನ್ನೂ ಸ್ಪಷ್ಟವಾಗಿ ಕಾಣುತ್ತವೆ. ಆದಕಾರಣ ಕನ್ನಡದಲ್ಲಿ ಚರಣದ ಎರಡನೆಯ ಆಕ್ಷರವು ಪ್ರಾಸಕ್ಕೆ ಯುಕ್ತವೆಂದು ಪ್ರಾಚೀನ ಕವಿಗಳು ನಿರ್ಧರಿಸಿದ್ದು ತಪ್ಪೆಂದು ನಾನು ಸರ್ವಥಾ ಉಸುರಲಾರೆ. ಆದರೆ ಆ ಪ್ರಾಸಕ್ಕೆ ಬದಲಾಗಿ ಅಂತ್ಯ ಪ್ರಾಸವನ್ನು ಆಚರಿಸಿದರೆ ಇಂಪಾಗಲಾರದೆಂದೂ ಪ್ರತಿಪಾದಿಸಲಾರೆ. ಕೊಡಗರ ಹಾಡುಗಳಲ್ಲಿ ಅಂತ್ಯಪ್ರಾಸವೇ ಪ್ರಧಾನ. ಪ್ರಾಚೀನ

ದ್ರಾವಿಡರ ಪದ್ಧತಿ ಹೀಗಿರಬಹುದಿತ್ತು. ನಾನೊಂದು ಸಾವಿರ ಚರಣಗಳನ್ನು ರಚಿಸಿರಬಹುದು. ಇದುವರೆಗೆ ಪ್ರಾಸ ಮಂಡನಕ್ಕೆ ನನ್ನ ಕಿವಿ ಒಗ್ಗಲಿಲ್ಲ! ಆದರೆ ಕೇಶವಪನದಿಂದ ಮುಖದ ಲಾವಣ್ಯವು ಸಂಪೂರ್ಣವಾಗಿ ನಾಶವಾಗುತ್ತದೆಂದು ಕಂಡವರಾರು ?

ಕಾವ್ಯಗಳನ್ನು ಹಳಗನ್ನಡದಲ್ಲಿಯೇ ಬರೆಯಬೇಕೆಂದು ಕೆಲವರ ಅಭಿಪ್ರಾಯವಿದೆ. ಇದು ಪಂಡಿತರ ಪರಂಪರೀಣ ಮತವಾಗಿರಬಹುದು. ದಕ್ಷಿಣದಲ್ಲಿ ಮಾತ್ರವಲ್ಲ, ಕೃಷ್ಣಾನದಿಯ ಉತ್ತರದಲ್ಲಿ ಗುಲ್ಬರ್ಗ ವಿಜಾಪುರ ಜಿಲ್ಲೆಗಳಲ್ಲಿ ದೊರೆತ ಶಾಸನಗಳಲ್ಲಿಯೂ ಪದ್ಯಗಳು ಹಳಗನ್ನಡದಲ್ಲಿಯೇ ರಚಿತವಾಗಿವೆ. ಗದ್ಯದಲ್ಲಿಯೂ ಸಮಾನಕಾಲದ ವ್ಯಾಕರಣವು ಒಂದೇ ವಿಧವಾಗಿದೆ. ಲೋಕಪ್ರಿಯವಾದ ಕಾವ್ಯಗಳನ್ನು ಈಗ ನಡುಗನ್ನಡ ವೆನ್ನಿಸಿಕೊಳ್ಳುವ ಹೊಸಗನ್ನಡ ಬರೆಯುವ ಪದ್ಧತಿ ಪ್ರಶಂಸನೀಯವೆಂದು ನಾವು ಹೇಳಬಹುದು. ಕೆಲವು ಹಳಗನ್ನಡ ಮಾತುಗಳನ್ನು ಪದ್ಯಗಳಲ್ಲಿ ಜೋಪಾನ ಮಾಡಿ ಇಟ್ಟುಕೊಳ್ಳುವುದು ಕನ್ನಡಿಗರಿಗೆ ಭಕ್ತಿಯ ಕರ್ತವ್ಯ. ಆದರೆ ಹಳಗನ್ನಡ ಗ್ರಂಥಗಳನ್ನು ಹೆಚ್ಚಿಸುವುದರಿಂದ ಸಂಸ್ಕೃತ ಗ್ರಂಥಗಳನ್ನು ಬರೆಯುವಷ್ಟೇ ಅಥವಾ ಒಂದಿಷ್ಟು ಹೆಚ್ಚು ಉಪಯೋಗವಿರಬಹುದಲ್ಲದೆ ನಾವು ಆಶಿಸುವಷ್ಟು ಲಾಭವಿಲ್ಲ.

ದೀರ್ಘಕಾವ್ಯಗಳನ್ನು ಸಾದ್ಯಂತವಾಗಿ ರಸಾಲಂಕಾರಗಳಿಂದ ತುಂಬು ವುದು ಅಸಾಧ್ಯ. ತುಂಬಿದರೂ ಜುಗುಪ್ಸಾವಹವಾಗುವುದರಿಂದ, ಕಾವ್ಯಗಳು ಸಂಕ್ಷಿಪ್ತವಾಗಿರಬೇಕೆಂದು ಹಲವು ಪಾಶ್ಚಾತ್ಯರ ಮತವಿದೆ. ಒಂದು ಕಥೆಯಲ್ಲಿ ಕೆಲವು ಭಾವಗಳು ಅನುರಂಜಕವಾಗಿರುವುವು. ಇನ್ನು ಕೆಲವು ರಸವಿಹೀನವಾಗಿರಬಹುದು. ನಾಟಕಗಳಲ್ಲಿ ಕೆಲವು ಸಂಭಾಷಣೆಗಳು ಗದ್ಯಾತ್ಮಕವಾಗಿ ಕೆಲವು ಪದ್ಯಾತ್ಮಕವಾಗಿ ಇರುತ್ತವೆ. ಚಂಪೂಕಾವ್ಯಗಳನ್ನು ರಚಿಸಲಿಕ್ಕೆ ಮೊತ್ತಮೊದಲು ಇದೇ ಕಾರಣವಾಗಿರಬಹುದಿತ್ತು. ಈಗ ಉಳಿದಿರುವ ಕಾವ್ಯಗಳಲ್ಲಿ ಗದ್ಯಾಂಶಗಳಲ್ಲಿಯೂ ರಸಾಲಂಕಾರಗಳು ಶೋಭಿಸಬಹುದು. ಪದ್ಯಗಳೆಲ್ಲವೂ ರಸಭರಿತವೆನ್ನಲಾಗದು. ರವೀಂದ್ರನಾಥ ಠಾಕೂರ ಶ್ರೀಮತಿ ಸರೋಜಿನಿ ನಾಯುಡು ಮುಂತಾದವರ ಕವಿತೆಗಳು ಸಂಕ್ಷಿಪ್ತವಾಗಿಯೇ ಇದೆ.

ಕವಿಗಳಿಗೆ ಸ್ವತಂತ್ರತೆಯಿರಬೇಕು. ಪುರಾಣದ ಕಥೆಗಳನ್ನು ಅನುವಾದಿಸಿ ಹೇಳುವುದು ಈಗ ಆವಶ್ಯಕವಲ್ಲ. ಅವುಗಳನ್ನು ಪರಿವರ್ತಿಸಿ ಅವುಗಳಲ್ಲಿ ಹೊಸ ಪ್ರಸಂಗಗಳನ್ನು ಸೇರಿಸಿ ತಮ್ಮ ನೂತನಮತಿಗೆ ತೋಚಿದಂತೆ ಹೇಳಿದರೆ ಹೇಳಲಿಕ್ಕೆ ಅವಕಾಶವಿದೆ. ಬ್ರಾಹ್ಮಣರೂ ಜೈನರೂ ಇತಿಹಾಸಗಳನ್ನು ತಮಗೆ ಬೇಕಾದಂತೆ ಹವಣಿಸಿಕೊಳ್ಳಲಿಲ್ಲವೇ? ಹದಿನೆಂಟು ಅಂಗಗಳನ್ನು ವರ್ಣಿಸಬೇಕೆಂಬ ವಿಧಿಯನ್ನು ನಿರಸಿಸಬೇಕು. ಅಭಿನವವಾದಿ ವಿದ್ಯಾನಂದ ಸಂಕರಿತ, 'ಕಾವ್ಯಸಾರ'ದಲ್ಲಿ ಸುಮಾರು ಐವತ್ತು ವರ್ಣನೆಗಳಿವೆ. ಪ್ರಪಂಚದಲ್ಲಿ ವರ್ಣನೀಯ ಪದಾರ್ಥಗಳಿಗೂ ಭಾವಗಳಿಗೂ ಮಿತಿಯಿದೆಯೇ ? ಭಾವಗಳು ಮುಖದಲ್ಲಿಯೂ ಚರಿತದಲ್ಲಿಯೂ ಹೇಗೆ ಕಾಣಿಸಿಕೊಳ್ಳುತ್ತವೆಂದು ಕನ್ನಡ ಕವಿಗಳು ವರ್ಣಿಸದಿರುವುದಿಲ್ಲ. ಕೆಳಗೆ ಅನುವಾದಿಸಿ ಬರೆದ ಕೊಲ್ಲಿನ್ಸ್ ಕವಿಯ ಕೃತಿಯನ್ನು 'ಭಾವಗಣ' ಓದಿದರೆ ವರ್ಣನೆಗೆ ಎಷ್ಟು ವಿಷಯಗಳು ದೊರೆಯಬಹುದು ಅವುಗಳನ್ನು ಎಷ್ಟು ವಿಧವಾಗಿ ವರ್ಣಿಸಬಹುದು ಎಂಬುದು ವಿಶದವಾದೀತು (ಪುಟ ೩೯ ನೋಡಿರಿ.)

ಈಗಿನ ದಿವಸದಲ್ಲಿ ಶಿಕ್ಷಿತ ಜನರು ರಾಷ್ಟ್ರೀಯ ಪ್ರಸಂಗಗಳನ್ನು ಕುರಿತು ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಓದಿದಷ್ಟು ಬೇರೆ ಯಾವ ವಿಷಯದಲ್ಲಿಯೂ ಓದುವುದಿಲ್ಲ. ವೃತ್ತಪತ್ರಿಕೆಗಳು ಹಳ್ಳಿಪಳ್ಳಿಗಳಲ್ಲಿ ನುಗ್ಗಿ ಎಲ್ಲಾ ಕಡೆಗಳಲ್ಲಿಯೂ ಅಧಿಕಾರಿಗಳ ನಡತೆ, ಪ್ರಜೆಗಳ ಸತ್ವ ಮುಂತಾದ ಪ್ರಸ್ತಾವಗಳಲ್ಲಿ ಅಭಿರುಚಿಯನ್ನು ಹುಟ್ಟಿಸುತ್ತವೆ. ಆದಕಾರಣ ವ್ಹಿಟ್ಟಿಯರ್ ಕವಿಯ ಒಂದು ಕೃತಿಯನ್ನು ('ವಿತ್ತಹೀನ ವರದ') ಅನುವಾದಿಸಿ ಬರೆದಿದ್ದೇನೆ. ಪ್ರತಿನಿಧಿಗಳ ಚುನಾವಣೆಗೆ ವೃತಿ ವರಣ; ಚುನಾಯಿಸುವವನ "ವೋಟ"ಗೆ ವರ; ಅವನಿಗೆ ವರದ -- ಈ ಹೆಸರುಗಳನ್ನು ಕೊಟ್ಟಿದ್ದೇನೆ "ವೋಟು" ಮತ್ತು ವೃತ ಇವಕ್ಕೆ ಮೂಲಾರ್ಥವೂ ಒಂದೇ. ಆದರೆ ಈಗಿನ ಅರ್ಥವು ಬೇರೆ ಯಾದದ್ದರಿಂದ ವೃ (= ಆರಿಸು) ಚುನಾಯಿಸು, ಪ್ರತಿನಿಧಿಯಾಗಿ ವರಿಸು ಧಾತುವಿನಿಂದ ಹುಟ್ಟಿದ ಮಾತುಗಳನ್ನು ಪ್ರಯೋಗಿಸಿದ್ದೇನೆ. (ಪುಟ ೪೭ ನೋಡಿರಿ.)

ಕವಿರಾಜರು ರಮಣೀಯತೆಯನ್ನು ಕಾಣದ ಸ್ಥಳವೆಲ್ಲಿ ? ಅವರು ತಾವು ನೋಡಿದುದನ್ನು ವರ್ಣಿಸಿದರೆ ಸಾಕು. ಸಾಮಯಿಕ ವರ್ಣನೆಗಳಿಗೆ ಈಗಿನ ಶಿಕ್ಷಿತ

ಜನರು ಮೆಚ್ಚುವುದಿಲ್ಲ. ಪೂರ್ವ ಕವಿಗಳು ಉತ್ಸಾಹದಿಂದ ರಚಿಸಿದ ಕೆಲವು ವರ್ಣನೆಗಳು ಈಗಿನವರಿಗೆ ಬೀಭತ್ಸವಾಗಿವೆ. ಪೂರ್ವ ಪದ್ಧತಿಗನುಸಾರವಾಗಿ ಏಕಪ್ರಕಾರತೆಯನ್ನು ಆಚರಿಸುವುದರಿಂದ ಓದುವವರಿಗೆ ಬೇಸರವಾಗುತ್ತದೆ.

(ಕ.ಸಾ. ಪರಿಷತ್ಪತ್ರಿಕೆ. ಜನವರಿ ೧೯೧೯ ೨೨--೨೮)

## ೩. ಹೊಸಗನ್ನಡ ಕಾವ್ಯಗಳು

ಉತ್ತರ ಕರ್ನಾಟಕದಲ್ಲಿಯೂ ತುಳುವ ದೇಶದಲ್ಲಿಯೂ ಹೊಸಗನ್ನಡ ಕಾವ್ಯಗಳಲ್ಲಿ ಬರೆಯುವುದರಲ್ಲಿ ಉತ್ಸಾಹವು ಈಚೆಗೆ ಸುಪ್ರಕಾಶವಾಗಿ ಹೆಚ್ಚುತ್ತಾ ಬಂದಿದೆ. ಹಳಗನ್ನಡ ಪಕ್ಷಪಾತಿಗಳು ಈ ಕೃತಿಗಳಿಗೆ ಮೂರು ಆಕ್ಷೇಪಗಳನ್ನೆತ್ತಿದ್ದಾರೆಂದು ಮಂಗಳೂರಿನ ಸ್ನೇಹಿತರು ನನಗೆ ತಿಳಿಸಿರು ವುದರಿಂದ ಕೆಲವು ವಿಷಯಗಳನ್ನು ಸ್ಪಷ್ಟೀಕರಿಸಲು ಅಪೇಕ್ಷಿಸುತ್ತೇನೆ.

ಹೊಸಗನ್ನಡದಲ್ಲಿ ಗ್ರಂಥಗಳನ್ನು ರಚಿಸುವ ಪದ್ಧತಿ ಹುಟ್ಟಿ ಈಗ ೮೦೦ ವರ್ಷಗಳು ಕಳೆದುಹೋದವು. ಗಡಿಯಾರದ ಮುಳ್ಳುಗಳು ಹಿಂದಕ್ಕೆ ತಿರುಗಲಾರವೆಂದು ಆಂಗ್ಲರು ಹೇಳುವುದುಂಟು. ಹೊಸಗನ್ನಡವನ್ನು ಕಾವ್ಯಗಳಲ್ಲಿ ಉಪಯೋಗಿಸಬಾರದೆಂಬ ವಾದವು ಮಹಾರಾಷ್ಟ್ರೀಯರು ಸಂಸ್ಕೃತವನ್ನೇ ಬರೆಯಬೇಕನ್ನುವಷ್ಟೇ ಅಸಂಗತವಾಗಿದೆ. ಆಂಗ್ಲ ಕವಿತೆಗಳನ್ನು ದೇಶಭಾಷೆಗಳಲ್ಲಿ ಅನುವಾದಿಸಬಾರದೆಂದು ಎರಡನೆಯ ಆಕ್ಷೇಪವಂತೆ. ಮೈಸೂರಿನಲ್ಲಿ ಶೇಕ್ಸ್‌ಪಿಯರನ ಮುಖ್ಯ ನಾಟಕಗಳನ್ನು ವಿದ್ವಾಂಸರು ಕನ್ನಡಿಸಿದ್ದಾರೆ. ಆಸ್ಥಾನ ಕವಿಗಳಾಗಿದ್ದ ಬಸವಪ್ಪಶಾಸ್ತ್ರಿಗಳು ಇವರೊಳ ಗೊಬ್ಬರು. ಗ್ರೀಕರ ಒಂದು ಕಥೆಯನ್ನು ಆಧಾರವಾಗಿಟ್ಟುಕೊಂಡು ಶ್ರೀ ಗೋವಿಂದಾಚಾರ್ಯರು ೫೦೦ ಷಟ್ಪದಿಗಳನ್ನು ರಚಿಸಿದ್ದಾರೆ. ಇಂತಹ ಪಾಷಂಡ ಕರ್ಮಗಳನ್ನು ನಿಲ್ಲಿಸಿಬಿಡಿರೆಂದು ಪಂಪನೇ ಹಂಪನಕಟ್ಟೆಯಲ್ಲಿ ಅವತರಿಸಿ ಗರ್ಜಿಸಿದರೂ ಕೇಳುವರೆಲ್ಲಿ ?

ಛಂದಸ್ಸಿನಲ್ಲಿ ಹೊಸ ರೀತಿಗಳನ್ನು ಕಲ್ಪಿಸಬಾರದೆಂಬುದು ಮೂರನೆಯ ಆಕ್ಷೇಪವಂತೆ. ನಾಗವರ್ಮನು ಕಥಿಸಿದ ಕಾವ್ಯಭೇದಗಳು ನೃಪತುಂಗನ

ಗ್ರಂಥದಲ್ಲಿ ಕಾಣುವುದಿಲ್ಲ. ಛಂದೋಂಬುಧಿಯ ಕೆಲವು ಪ್ರತಿಗಳಲ್ಲಿಲ್ಲದ ವೃತ್ತಗಳನ್ನು ತರುವಾಯದ ಪ್ರತಿಗಳಲ್ಲಿ ಸೇರಿಸಿದರು. ನಾಗವರ್ಮನಿಗೆ ಎಷ್ಟು ಬಗೆಯ ರಗಳೆಗಳು ತಿಳಿದಿದ್ದವೋ ನಿಶ್ಚಯವಿಲ್ಲ. ಲಲಿತ, ಮಂದಾನಿಲ ಉತ್ಸಾಹವೆಂಬ ಮೂರು ಜಾತಿಗಳನ್ನು ಉದಾಹರಿಸಿದವರು ಉತ್ಸಾಹದ ಚರಣದಲ್ಲಿ ೨೪ ಮಾತ್ರೆಗಳಿರಬೇಕೆಂದರು. ಪಂಪನು ೩೫ ಮಾತ್ರೆಗಳನ್ನು ಹಾಕಿದನು. ನಾಗವರ್ಮನ ಕಾಲದಲ್ಲಿ ಸೀಸಪದ್ಯವು ಪ್ರಸಿದ್ಧವಾಗಿತ್ತೇ ? ಷಟ್ಪದಿಗಳಲ್ಲಿ ಒಂದೇ ಪ್ರಚಲಿತವಾಗಿದ್ದಿರಬಹುದು. ಆಗ ಅವಿಜ್ಞಾತವಾಗಿದ್ದ ಸಾಂಗತ್ಯದಲ್ಲಿ ಈಚೆಗೆ ಎಷ್ಟೋ ಕಾವ್ಯಗಳು ರಚಿತವಾಗಿವೆ. ಹೀಗಿದ್ದು ಈಗಿನವರು ಹೊಸ ಛಂದಸ್ಸುಗಳನ್ನು ಕಲ್ಪಿಸುವುದಕ್ಕೆ ಪೂರ್ವಿಕರ ಬಲವಾದ ಪ್ರಮಾಣವಿದೆ.

ಸಾಂಗತ್ಯವು ಮರಾಠಿ ಸಾಕಿಯ ರೂಪಾಂತರವಾಗಿರಬಹುದೆಂದು ನನ್ನ "ಕನ್ನಡದ ಕಥಾನಕ' ದಲ್ಲಿ ಹೇಳಿದೆ. ನಾನು "ಆಂಗ್ಲ ಕವಿತಾವಳಿ " ಯಲ್ಲಿ ಕನ್ನಡದ ಛಂದಸ್ಸುಗಳನ್ನು ಬದಲಿಸುವಾಗ ಇತರ ಭಾಷೆಗಳ ನಿದರ್ಶನವನ್ನು ನೋಡಿ ಬದಲಿಸಿದ್ದೇನೆ. ಕಂದದಲ್ಲಿ ಗಣನಿಯಮಗಳನ್ನು ಬಿಟ್ಟರೆ ಸಂಸ್ಕೃತದ ಆರ್ಯಾಗೀತಿಯಾಗಬಹುದು.

ಸವಧೂಕಃ ಸುಖಿನೋಸ್ಮಿ--

ನ್ನವರತಮ ಮಂದಾರಾಗ ತಾಮರ ಸದೃಶಃ

ಈ ಆರ್ಯಾಗೀತಿಯಲ್ಲಿ ಐದನೆಯ ಗಣಸ್ಥಾನದಲ್ಲಿ ಜಗಣ ಬಂದಿದೆ. ಆರನೆಯ ಸ್ಥಾನದಲ್ಲಿಲ್ಲ. ಅಕ್ಕರಿಕೆಯಲ್ಲಿ ' ಮುರರಿಪು ಬೊಮ್ಮಂ' ಎಂಬ ನಿಯಮವನ್ನು ಬಿಟ್ಟರೆ ಮರಾಠಿಯ ಅಂಜನೀಗೀತವಾಗುತ್ತದೆ. ಉತ್ಸಾಹ ರಗಳೆಯಲ್ಲಿ ೨೨ ಮಾತ್ರೆಗಳ ಚರಣಗಳನ್ನು ಬರೆದರೆ ಗುಜರಾತಿಯವರ ಮಹೀದೀಪವಾಗುತ್ತದೆ. ಇಂತಹ ದೃಷ್ಟಾಂತಗಳನ್ನು ನಾನು ಲಕ್ಷಿಸಿದರೂ ಹೊಸ ಹೆಸರುಗಳು ಅನವಶ್ಯಕವೆಂದು "ಬೇಕಾದರೆ ಶಿಥಿಲ ಕಂದ, ಶಿಥಿಲ ರಗಳೆ" ಎಂಬಂತೆ ನಾಮಗಳನ್ನು ನಿರ್ಮಿಸಿಕೊಳ್ಳಬಹುದೆಂದು ಸೂಚಿಸಿದ್ದೇನೆ.

ಛಂದಸ್ಸಿನ ನಿಮಿತ್ತವೂ ಗೀತದ ಉದ್ದೇಶವೂ ಒಂದೇ. ತಾಳದಲ್ಲಿ ಲಕ್ಷ್ಯವಿಟ್ಟು ಛಂದಸ್ಸುಗಳಲ್ಲಿ ಉಪಯುಕ್ತವಾದ ಕೆಲವು ಜಾತಿಗಳನ್ನು ರಕ್ಷಿಸಿ ಕೆಲಸಕ್ಕೆ ಬಾರದ ನಿಯಮಗಳನ್ನು ಕಿತ್ತು ಹಾಕಿದರೆ ಬರೆಯುವವರಿಗೂ ಓದುವವರಿಗೂ ಸೌಖ್ಯವೇ ಅಲ್ಲದೆ ಸಂಕಷ್ಟವಾಗಲಾರದು. ಕೃಪಣರಿಂದ ಯಾವ ಕಾರ್ಯವೂ ಸಾಗದು. ಅವಿವೇಕಿಗಳು ಯಾವ ಕಾರ್ಯವನ್ನೂ ಕೆಡಿಸಬಹುದು.

(ಸ್ವದೇಶಾಭಿಮಾನಿ. ಜುಲಾಯಿ ೧೧ ೧೯೧೯)

## ೪ ಛಂದೋವಿಚಾರ

### (ಕೆಲವು ಬಿಡಿ ಬರಹಗಳು)

**ಇದು ಯಾವ ಪ್ರಾಸ ?**

ಪಂಪನು ಭಾರತದಲ್ಲಿ

ಆವಗಮೆತನಗದೊಂದು
ನಾಮದೊಳಂ ವೆಂಗಿಪಮಿಕರಂ ಸೊಗಯಿಸುಗುಂ ॥ ( ೧೪;೪೦)

ಎಂದು ಬರೆದಿರುವನು. ಇದು ಯಾವ ಪ್ರಾಸ? ವಕಾರವು ವರ್ಗಾಕ್ಷರವಲ್ಲ. ಸಮೀಪ ಪ್ರಾಸಕ್ಕೆ ಶ,ಷ,ಸ ವರ್ಣತ್ರಯಮಂ ವಿದಿತ ಪ್ರಾಸ ವಿವಿಕ್ತಾಸ್ಪದದೊಳ್ಪಿರೆ -- ಎಂದು ಲಕ್ಷಣವನ್ನು ನೃಪತುಂಗನು ವಿವರಿಸಿರುವನು. ಅದೊಂದು ಉದಾಹರಣೆ ಮಾತ್ರವೊ? ಭಾರತದಲ್ಲಿ ಮುದ್ರಿತ ಪಾಠವು ತಪ್ಪೊ?

ಈ ಪ್ರಾಸವನ್ನು ಅನುಸರಿಸಿದ ಕವಿ ಪಂಪನೊಬ್ಬನೇ ಅಲ್ಲ. ಮೈಸೂರಿನ ತಿರುಮಕೂಡ್ಲು ನರಸೀಪುರ ೬೯ -- ಈ ಶಾಸನದಲ್ಲಿ ಒಂದು ಪದ್ಯ ಹೀಗಿದೆ :

ಭೀಮಾರ್ಜುನರಳವಂ ಪ್ರೋ
ಲ್ಲಾಮೇದಿನಿ ನೆಗಲ್ದಿ ತಮ್ಮ ತೀರ್ವರ್ಗೆ ಮಹಾ
ದೇವನೊಟಂಬ ಕುಲಾಂತಕ

ದೇವ ಪದಾಬ್ಜಂಗಳವರ್ಗೆಮಾರಯಿಸ್ವರರ

( ಕನ್ನಡದಲ್ಲಿ ವ, ಮ, ಅದಲು ಬದಲಾಗುವುದು ಅಸಹಜವೇನಲ್ಲ. ಉದಾ.ಗೆ ತಾಮರೆ--ತಾವರೆ; ತಿಮಿರ್-ತಿವಿರ್; ಎಮಗೆ-ಎವಗೆ ಈ ಸಂದರ್ಭದಲ್ಲಿ ಕೇಶಿರಾಜ ಹೇಳಿದ 'ವಮಹಪಭೇದದಿಂ' ಎಂಬ ರೂಢಿ ವಿರೋಧೀ ನಿಯಮವನ್ನೂ ಗಮನಿಸಬಹುದು.

ಪ್ರಾಸನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸದಿದ್ದುದಕ್ಕೆ ಪಂಪನಲ್ಲಿ ಇನ್ನೂ ಹಲವಾರು ಉದಾ.ಗಳು ಸಿಕ್ಕುವುವು. !ಇದೊಂದು ಮಾದರಿ :

ಮುಳಿದು ಶಿಶುಪಾಲನಾ ಸಭೆ
ಯೊಳಗೆ ಮಹಾಪ್ರಳಯ ಜಳಧಿನಾದದಿನಿರದು
ಚ್ಚಳಿಸಿ ನುಡಿದಂತೆ ಕಳೆ ಕಳೆ
ಹರಿಗೆತ್ತಿದನರ್ಘ್ಯದರ್ಘ್ಯಮಂ ಧರ್ಮಸುತಾ ॥ ೬.೪)

ಆರ್ಯಗೀತಿ -- ಕಂದ

ಆರ್ಯಗೀತಿಯ ಆರನೆಯ ಗಣದಲ್ಲಿ ನಾಲ್ಕು ಲಘುಗಳಿದ್ದರೆ ಎರಡನೆಯದು ಪದದ ಮೊದಲಾಗಿರಬೇಕು. ಅದಲ್ಲದೆ ಏಳನೆಯ ಗಣದಲ್ಲಿ ಅಥವಾ ಉತ್ತರಾರ್ಧದ ಐದನೆಯ ಗಣದಲ್ಲಿ ನಾಲ್ಕು ಲಘುಗಳಿದ್ದರೆ ಮೊದಲನೆಯದು ಪದಾದಿಯಾಗಬೇಕು-ಎಂಬ ನಿಯಮಗಳನ್ನು ಸಂಸ್ಕೃತ ಲಾಕ್ಷಣಿಕರು ವಿಧಿಸಿರುವಂತೆ ನಾಗವರ್ಮನು ಆರ್ಯಗೀತಿಯಿಂದ ಹುಟ್ಟಿದ ಕಂದದಲ್ಲಿ 'ಜಗಣಂ ಮೇಣ್ ನಗಣಮಕ್ಕೆಯಾರನೆಯೆಡೆಯೊಳ್' ಎಂದು ಮಾತ್ರ ಹೇಳಿ ನಾಲ್ಕು ಲಘುಗಳ ವಿಷಯದಲ್ಲಿ ಬೇರೆ ಕಟ್ಟುಗಳನ್ನು ವಿಧಿಸಿಲ್ಲ. ಕವಿಗಳ ಪದ್ಧತಿಯನ್ನು ನೋಡಿದರೆ --

ದಿಷಣರ ಕೃತಿಗಳೊಳೆಸೆವಭಿ
ಲಷಿತಗುಣಂಗಳನೆ ಬಿಸುಟು ಮಾತ್ಸರ್ಯ ಮಹಾ!

ಓಗೆ ಬರೆಯುವ ವಾಡಿಕೆಯಿತ್ತು. ಆದರೆ ಎರಡನೆಯ ಲಘುನಲ್ಲಿ ಪದಾಂತ್ಯಕ್ಕೂ ಪದಾದಿಗೂ ಸಂಧಿ ಮಾಡಿ

ನೆಗಳ್ದುವು ಪಟು ಪಟಹ ಮೃದಂ

ಗಗಭೀರಾರಾವಮವರ ನಾಟಕ ಶಾರಾ!

ಹೀಗೆ ಬರೆಯುವ ವಾಡಿಕೆಯೂ ಇತ್ತು. ನಾಗವರ್ಮನು ಇಂತಹ ನಿಯಮಗಳಿಗೆ ಪ್ರಾಮುಖ್ಯವನ್ನು ಹಚ್ಚದಿರಲಿಕ್ಕೆ ಕಾರಣವೇನೊ ತಿಳಿಯದು. ಎರಡನೆಯ ಲಘು ಫದಾದಿಯಾಗಬೇಕೆಂಬುದಕ್ಕೆ ಕಾರಣವೇನು? ಗಣದ ಪ್ರಥಮಾಕ್ಷರವು ಲಘುವಾಗಲಿ ಗುರುವಾಗಲಿ, ಅದೇ ಪದದ ಮೊದಲಾದರೆ ನನ್ನ ಕಿವಿಗೆ ಸುಖಕರವಾಗಿ ಕೇಳಿಸುತ್ತದೆ. 'ನೆಬಿಸುಟು' ಎಂಬಂತೆ ಬರೆದರೆ ವ್ಯಾಕರಣ ಪ್ರತಿಹತವಾದಂತೆ ಕೇಳಿಸುತ್ತದೆ.

ಇನ್ನೊಂದು ವಿಚಾರ: ನಾಗವರ್ಮನ ಕಾದಂಬರಿಯಲ್ಲಿ ೧೯೬ ಚಂಪಕಮಾಲೆ, ೧೪೮ ಮಹಾಸ್ರಗ್ಧರೆ, ೧೪೧ ಮತ್ತೇಭವಿಕ್ರೀಡಿತ, ೫೪ ಉತ್ಪಲಮಾಲಾ, ೧೦ ಪೃಥ್ವೀ, ೯ ಸ್ರಗ್ಧರೆ, ೭ ಹರಿಣೀ, ೨ ರಥೋದ್ಧತ, ೨ ಆರ್ಯೆ, ೩ ರಗಳೆ, ೩ ಅಕ್ಕರ, ೨ ಪೆರಿಯಕ್ಕರ, ಉಳಿದವು ಕಂದ ಪದ್ಯಗಳಾಗಿವೆ.

ಇಲ್ಲಿ ಕಾಣಿಸಿದ ಮೊದಲಿನ ಮೂರು ವೃತ್ತಗಳಲ್ಲಿ ಕವಿಗಳಿಗೆ ಇಷ್ಟು ಪ್ರೀತಿಯಿರಲಿಕ್ಕೆ ಕಾರಣವೇನು ?

(ಕ.ಸಾ.ಪರಿಷತ್ಪತ್ರಿಕೆ, ೫-೧,ಪು. ೩೫)

## ಪದ್ಯ ರಚನೆ

ಕಾವ್ಯಗಳಲ್ಲಿ ಓದುಗಬ್ಬ ಮತ್ತು ಹಾಡುಗಬ್ಬ-ಈ ಎರಡು ವಿಧಗಳನ್ನು ಒಪ್ಪಿಕೊಳ್ಳುವರು. ಓದುಗಬ್ಬಗಳ ನಿಯಮಗಳನ್ನು ಹಾಡುಗಬ್ಬಗಳಲ್ಲಿ ಆಚರಿಸುವುದಿಲ್ಲ. ಓದುಗಬ್ಬಗಳಲ್ಲಿಯೂ ಹೊಸ ಮಾದರಿಯ ಪದ್ಯಗಳನ್ನು ಆಗಾಗ ಕಲ್ಪಿಸಿಕೊಂಡಿದ್ದಾರೆ. ಈಗಲೂ ಕಲ್ಪಿಸಿಕೊಳ್ಳಬಾರದೇ? ಬಹುದಾದರೆ ಯಾವ ನಿಯಮಗಳನ್ನು ಕಾಪಾಡಿ, ಯಾವವುಗಳನ್ನು ಬಿಟ್ಟುಬಿಡಬಹುದು? ನನ್ನ ಅಭಿಪ್ರಾಯವೇನೆಂದರೆ. ಈಗ ಪ್ರಚಲಿತವಾಗಿರುವ ಕಂದ, ರಗಳೆ, ಷಟ್ಪದಿ, ಸೀಸ, ಅಕ್ಕರಿಕೆ ಮುಂತಾದ ಜಾತಿಗಳು ಸಾಕು;ಆದರೆ ಇವುಗಳಲ್ಲಿ ತಾಳಕ್ಕೆ ಬೇಕಾಗದಿರುವ ಕೆಲವು ನಿಯಮಗಳನ್ನು ತಿರಸ್ಕರಿಸಬಹುದು. ಹೇಗೆಂದರೆ, ಸಂಸ್ಕೃತದಲ್ಲಿ ಆರ್ಯಾ ಗೀತಿಯ ಭಿನ್ನರೂಪವಾದ ಸ್ಕಂಧಕ ಎಂಬ ಪದ್ಯಕ್ಕೆ ಹೇಳಿದ ಲಕ್ಷಣಗಳನ್ನು ಕನ್ನಡ ಕವಿಗಳು ಕಂದಕ್ಕೆ ಹಚ್ಚಿದರು. ಪ್ರಾಕೃತದಲ್ಲಿ ಕಂದ ಎಂದೆನ್ನಿಸಿಕೊಳ್ಳುವ ವೃತ್ತವು, "ಣರೇ ಕಂಸ ಜಾಣೋಹಿಹೋ ಏಕ ಬಾಲಾ

ಇ" ಎಂಬಂತಿದೆ (ಪ್ರಾಕೃತ ಪೈಂಗಳಂ). ಕನ್ನಡದ ಕಂದವು ಇದರಿಂದ ಹುಟ್ಟಿದಂತೆ ಕಾಣುವುದಿಲ್ಲ. ಕವಿಗಳ ಪದ್ಧತಿಗೆ ವ್ಯತಿರಿಕ್ತವಾಗಿ ಬರೆದರೆ "ಗಂಡನಿಲ್ಲದ ಶಶಿವದನೆಗೆ ಗರ್ಭಮಾದ ತೆರನೊಳ್ ಕೆಡುಗುಂ" ಎಂದು ನಾಗವರ್ಮನು ಪ್ರಬೋಧಿಸಿರುವನು. ಏನು ಕೆಟ್ಟು ಹೋಗುವುದು? ತಾಯಿಯನ್ನು ಮಗುವನ್ನು ವಿಧರ್ಮ ಭಯಾರ್ತರು ನಿಂದಿಸುವರೇ ಹೊರತು ಅವರ ಕಾಯಿಕ ಅಥವಾ ಮಾನಸಿಕ ಸ್ವಾಸ್ಥ್ಯಕ್ಕಾಗಲಿ ಲಾವಣ್ಯಕ್ಕಾಗಲಿ ನ್ಯೂನತೆ ಬರಲಾರದು. "ಷಷ್ಠೋಜ" ಎಂದು ಪಿಂಗಳನ ಸೂತ್ರವಿರುವಲ್ಲಿ ಜಗಣಕ್ಕೆ ಬದಲಾಗಿ ನಾಲ್ಕು ಲಘುಗಳ ನಗಣವಿರಬಹುದೆಂದು ಕವಿಗಳು ವಿಧಿಸಿದರು. 'ಮಖರಿಪು 'ಗಣಕ್ಕೆ ಬದಲಾಗಿ 'ಶರ್ವಂ' ಬಂದರೆ ತಾಳಕ್ಕೆ ತೊಡಕೆಲ್ಲಿ? ಅಕ್ಕರಿಕೆಯಲ್ಲಿ " ಮುರರಿಪು ಬೊಮ್ಮಂ" ಎಂಬ ಗಣಗಳಿಗೆ ಬದಲಾಗಿ ನಾಲ್ಕು ಮಾತ್ರೆಗಳ ಬೇರೆ ಗಣಗಳನ್ನು ಹಾಕಿದರೆ ತಾಳದ ಗಣನೆಗೆ ಹಾನಿ ಬರುವುದಿಲ್ಲ. ಇಂತಹ ವಿಪರ್ಯಸ್ತ ಪದ್ಯಗಳಿಗೆ ಬೇರೆ ಹೆಸರುಗಳನ್ನು ಹಾಕಬಹುದು. ಒಂದು ರಾಗದ ಸ್ವರಗಳನ್ನು ಬದಲಿಸಿದರೆ ಅದರ ಜಾತಿ ಬಹಳ ಮಟ್ಟಿಗೆ ಇದ್ದಂತೆಯೇ ನಿಲ್ಲಬಹುದು;ಅದು ಬೇರೆ ರಾಗವಾಗಬಹುದು. ಅಥವಾ ಕೇಳಲಿಕ್ಕೆ ವಿಲಕ್ಷಣವಾಗಬಹುದು. ಹಾಗೆಯೇ ಛಂದಸ್ಸಿನ ವಿಪರ್ಯಯಗಳಿಂದ ಒಂದು ಪದ್ಯದ ಬೆಡಗು ಕೆಡಬೇಕೆಂದಿಲ್ಲ, ಕೆಡಲೂಬಹುದು. ಈ ಪತ್ರಿಕೆಯಲ್ಲಿ ದಯವಿಟ್ಟು ವಿಮರ್ಶಿಸಿದ ನನ್ನ "ಆಂಗ್ಲ ಕವಿತಾವಳಿ"ಯಲ್ಲಿ ತಾಳಕ್ಕೆ ಸರಿಯಾಗಿ ನಿಲ್ಲುವ ವಿಪರ್ಯಾಸಗಳನ್ನು ಉಪಯೋಗಿಸಿ, ಕೆಲವು ಪ್ರಸಿದ್ಧ ಛಂದಸ್ಸುಗಳನ್ನೇ ಅನುಸರಿಸಿದೆ.

(ಕ.ಸಾ. ಪರಿಷತ್ಪತ್ರಿಕೆ. ೫ ನಂ.೧. ಪು ೫೪)

## ದಕ್ಷಿಣೋತ್ತರ ಮಾರ್ಗಗಳು

ಮದ್ರಾಸಿನ ಪ್ರಾಗ್ದೇಶ್ಯಲಿಖಿತ ಭಂಡಾರದಲ್ಲಿ ಕವಿರಾಜಮಾರ್ಗದ ಒಂದು ಪ್ರತಿಯುಂಟು. ಈ ಗ್ರಂಥವು ಅಚ್ಚಾಗುವುದಕ್ಕೆ ಮುಂಚೆ, ಆ ಪ್ರತಿಯಲ್ಲಿ ಜರದ್ವೃಧೂಪಮಿತ, ಹಳಗನ್ನಡ, ಬೆದೆಂಡೆ ಚೆತ್ತಾಣ, ದಕ್ಷಿಣೋತ್ತರ ಮಾರ್ಗ ಮುಂತಾದ ವಿಷಯಗಳನ್ನು ಕಂಡು ಬಹು ಕೌತುಕವಾಯಿತು. ಈಗಿನ ದಿವಸಗಳಲ್ಲಿ ದಕ್ಷಿಣೋತ್ತರ ಮಾರ್ಗಗಳಲ್ಲದೆ, ಪೂರ್ವ ಪಶ್ಚಿಮ ಮಾರ್ಗಗಳನ್ನು-ಬಳ್ಳಾರಿ, ಜಿಲ್ಲೆಗಳ ಭಾಷೆಗಳನ್ನು ಕುರಿತು ಅನೇಕರು

ಬರೆಯುವರು. ಹೀಗಿದ್ದು, ನೃಪತುಂಗನ ಪರಿಸ್ಫುಟ ವಚನಗಳಲ್ಲಿ ನನಗೆ ಒಂದಿಷ್ಟು ಅವಿಶ್ವಾಸವೂ ತಟ್ಟಲಿಲ್ಲ. ಆದರೆ ಈ ಮಾರ್ಗ ಭೇದಗಳು ಎಷ್ಟು ಕಾಲದವರೆಗೆ ನಿಂತಿದ್ದುವು? ಪಂಪ ಭಾರತದಲ್ಲಿ, ನೋಟ್ಪುದು (II, ೬೫) ; ಬೇಟ್ಪರು (II,೬೭);ಎಡೆಯಾಟ್ಪ(I, ೧೦೬) --ಮುಂತಾದ ಕ್ರಿಯಾ ರೂಪಗಳು ದೊರಕುತ್ತವೆ. ಆದಿ ಪುರಾಣದಲ್ಲಿಯೂ, ನೋಟ್ಪಿ ಬೇಟ್ಪಿ ಕುಳಿರ್ಕೊಟ್ಪಿ (I, ೭೫; XI, ೮೦)ಇಂತಹ ರೂಪಗಳು ಕಾಣುತ್ತವೆ. ಮಾಟ್ಪಿ ಎಂಬ ಮಾತು ಇನ್ನೂ ಸಾಧಾರಣವಾಗಿದೆ. ಹಾಗಾದರೆ ಪಂಪನ ತಿರುಳ್ಗನ್ನಡವು ದಕ್ಷಿಣ ಮಾರ್ಗಕ್ಕೆ ಸೇರಿದುದಾಯಿತು. ಆದರೆ ನೃಪತುಂಗನು ಕೊಟ್ಟಿರುವ ಇನ್ನೊಂದು ಉದಾಹರಣದ ದೃಷ್ಟಿಯಿಂದ ನೋಡೋಣ.'ಇಸುವ'ದಕ್ಷಿಣ ಮಾರ್ಗ, 'ಇಪ ಉತ್ತರ ಮಾರ್ಗ, 'ಇಪ್ಪ'ಉತ್ತರೋತ್ತರ ಮಾರ್ಗವೋ? ಆದಿಪುರಾಣದಲ್ಲಿ, ಸೊಗಯಿಪ(II, ೬೦) ; ಬಣ್ಣಿಪೆಂ (II, ೭೬) ; ಲಲ್ಲಯಿಪ (III, ೪೩) ಓಲಗಿಪುದು (V, ૩೬) ; ಕೊಲಿಪಂ (V, ೮೧) ; ಎನಿಪುದು (VI, ೮೨); ಪುಯ್ಯಲಿಪ (XII, ೭೬) ;ಬಿನ್ನವಿಪರ್ (XIV, ೧೦). ಈ ಉತ್ತರ ಮಾರ್ಗದ ರೂಪಗಳು ಮಾತ್ರವಲ್ಲ, ಶೋಕಿಪ್ಪೆ (III, ೫೫) ಈ ಉತ್ತರೋತ್ತರ ಮಾರ್ಗದ ರೂಪವು ಹೇಗೆ ಬಂದಿದೆ? ಮಧ್ಯಪ್ರದೇಶದ ತಿರುಳ್ಗನ್ನಡದಲ್ಲಿ ಎರಡು ಮಾರ್ಗಗಳು ಒಟ್ಟುಗೂಡುವುದು ಸಹಜವೆನ್ನುತ್ತೀರೊ? ಶಿವಮೊಗ್ಗೆಯ ಶಾಸನದಲ್ಲಿ 'ಪುರುಡಿಪ್ಪಂ' (ಕವಿಚರಿತೆ, ಪು. ೭೯) ಈ ಉತ್ತರೋತ್ತರ ಮಾರ್ಗದ ರೂಪವು ಹೇಗೆ ಬಂದಿವೆ? ಪಂಪರಾಮಾಯಣದ ಪ್ರಥಮ ವೃತ್ತದಲ್ಲಿರುವ 'ನಮಗೆ' ಉತ್ತರ ಮಾರ್ಗವಂತೆ. ಎರಡನೆಯ ಪದ್ಯದಲ್ಲಿ 'ಎಂಮೊಳ್' ಇದೆಯಷ್ಟೆ? ಹೀಗಿರಲು, ನಮ್ಮ ಕವಿಗಳು ದಕ್ಷಿಣೋತ್ತರ ಮಾರ್ಗಭೇದವನ್ನು ಎಷ್ಟು ಕಾಲದ ತನಕ ಅನುಸರಿಸಿದರು, ಯಾವಾಗ ಬಿಟ್ಟುಬಿಟ್ಟರು, ಎಂಬುದನ್ನು ಹೇಗೆ ಹೇಳಬಹುದು? ಕೃಷ್ಣಾ ನದಿಯ ಸಮೀಪದಲ್ಲಿ ಹುಟ್ಟಿ ಬೆಳೆದ ರನ್ನನ ಅಜಿತತೀರ್ಥಂಕರ ಪುರಾಣದಲ್ಲಿಯೂ 'ನಮಗೆ' (I, ೨) ಮುಂತಾದ ಉತ್ತರ ಮಾರ್ಗದ ಲಕ್ಷಣಗಳಿರುವುವಲ್ಲದೆ, ನೋಟ (I, ೨೭), ಮಾಪ್ಪಿ (II, ೮೦) ಮುಂತಾದ ದಕ್ಷಿಣ ಮಾರ್ಗದ ವಚನಗಳೂ ಸಿಕ್ಕತ್ತವೆ.

(ಕ.ಸಾ. ಪರಿಷತ್ಪತ್ರಿಕೆ, ಸಂ.೩.ಪು ೧೦೧-೧೦೨)

## 'ನಮ್ಮ' ಪಕ್ಷಪಾತಿಗಳು

ಉತ್ತರ ಮಾರ್ಗದ ಕವಿಗಳು 'ನಮ್ಮ' ಶಬ್ದವನ್ನು ವರ್ಜಿಸುವುದಿಲ್ಲವೆಂದು ಭಟ್ಟಾಕಲಂಕನು ಹೇಳಿರುವನಷ್ಟೆ. ನೃಪತುಂಗನು 'ನಮಗೆ-- (ಕ. ಮಾ, I,೨); ನಾಗವರ್ಮನು ನಮ್ಮೊಳ್, ನಮಗೆ, ನಮ್ಮ (ಕಾ, I,೨, ಛ, I,೨, ೫) ; ರನ್ನನು ನಮಗೆ-- (ಅ. ಪು. I, ೨, ಗ, ಯು, I, ೩) ; ಈ ಮಾತುಗಳನ್ನು ಪ್ರಯೋಗಿಸಿದರು. ಪಂಪರಾಮಾಯಣದ ಪ್ರಥಮವೃತ್ತವನ್ನು ಉತ್ತರಮಾರ್ಗಕ್ಕೆ ಉದಾಹರಣವಾಗಿ ಭಟ್ಟಾಕಲಂಕನೇ ಎತ್ತಿಹಾಕಿರುವನು. ಚೌಂಡರಾಜನು ಅದೇ ಮಾರ್ಗದವನು-- (ಅ, ದ, ಚ, I,೨, ೪, ೮) ಈ ಮರ್ಯಾದೆಯನ್ನು ಎಲ್ಲಾ ಕವಿಗಳು ಆಚರಿಸಿದ್ದರೆ ಎಷ್ಟೋ ಉಪಯೋಗವಿತ್ತು. ಅಗ್ಗಳನ ಚ, ಪು.I, ೧೩, ಪದ್ಯದಿಂದ ಆತನು ಇಂಗಳೇಶ್ವರದವನೆಂಬ ಊಹೆಗೆ ಆಧಾರ ದೊರಕುತ್ತಿತ್ತು. ಎರಡನೆಯ ನಾಗನರ್ಮನು ಕಲ್ಯಾಣನಗರದಲ್ಲಿ ಕಟಕೋಪಾಧ್ಯಾಯನಾಗಿದ್ದರೆ ಅವನು ಕಾವ್ಯಾ ಲೋಕನದ ಪ್ರಥಮ ಪದ್ಯವನ್ನು ಯಾವ ಮಾರ್ಗಕ್ಕನುಸಾರವಾಗಿ ಬರೆದನೆಂಬುದು ಸ್ಪಷ್ಟವಾಗುತ್ತಿತ್ತು. ನೇಮಿಚಂದ್ರನು ಯಾವ ಪ್ರಾಂತದವನೆಂದು ಹೇಳಬಹುದಿತ್ತು(ನೇ, ಪು, I, ೧, ೩, ೪, ೧೨)ಕಮಲಭವನು ಅಲ್ಲಿಯವನೇ ಎಂದು ನಂಬಬಹುದಿತ್ತು (ಶಾ, ಪು, I, ೨, ೩)ಆದರೆ ಪಂಪನ ವಿಷಯದಲ್ಲೇ ಸಂದೇಹವು ಕಾಣುತ್ತದೆ. ಅವನು ನಾಂದೀ ಪದ್ಯಗಳಲ್ಲಿ ಉತ್ತರ ಮಾರ್ಗವನ್ನು ಹಿಡಿಯದಿದ್ದರೂ, ಆದಿ ಪುರಾಣ, II,೧೯, ವಚನ; XIII,೫೮, ವಚನ; XIV,೩೨;ಭಾರತ, III,೪, ವಚನ;೨೬ ಮುಂತಾದೆಡೆಗಳಲ್ಲಿ ಆ ಮಾರ್ಗವನ್ನು ಅನುಸರಿಸಿರುವಂತೆ ಮುದ್ರಿತ ಪುಸ್ತಕಗಳಿಂದ ಕಾಣುತ್ತದೆ.

(ಕ. ಸಾ. ಪರಿಷತ್ಪತ್ರಿಕೆ ೩ ಏಪ್ರಿಲ್ ೧೯೧೯)

(ಹ. ನಾ. ಅವರು ಶೇಕ್ಸಪಿಯರ್‌ನಿಂದ ಲಾಂಗ್‌ಫೆಲೊವರೆಗಿನ ಇಂಗ್ಲಿಷ್ ಕವನಗಳನ್ನು, ಕಾವ್ಯ ಭಾಗಗಳನ್ನು ಅನುವಾದಿಸಿ, ೧೯೧೭ರಿಂದ ಪತ್ರಿಕೆಗಳಲ್ಲಿ ಪ್ರಕಟಿಸತೊಡಗಿದರು. ತಮ್ಮ ಎಲ್ಲ ಅನುವಾದಗಳನ್ನು ಸಂಕಲಿಸಿ 'ಆಂಗ್ಲ ಕವಿತಾವಳಿ'ಯನ್ನು ಪ್ರಕಟಿಸಿದರು. ಆ ಚಿಕ್ಕ ಪುಸ್ತಕವು ಲಭ್ಯವಿರಲಿಲ್ಲ. ಕೊನೆಗೊಮ್ಮೆ ದೊರಕಿಸಿದಾಗ, ಡಾ. ಎಂ. ಎಸ್. ವಿ. ಪಂಡಿತಾರಾಧ್ಯರು ಅದನ್ನು ಸಂಪಾದಿಸಿ, ಮೂಲದ ಇಂಗ್ಲಿಶ್ ಪದ್ಯಗಳೊಡನೆ ಪ್ರಕಟಿಸಿದ್ದಾರೆ. (ಪ್ರಬೋಧ ಪುಸ್ತಕ ಮಾಲೆ, ಮೈಸೂರು, ೧೯೮೫)

ಆಂಗ್ಲ ಕವಿತೆಗಳನ್ನು ಕನ್ನಡಕ್ಕೆ ತರಬೇಕೆಂದು ಈ ಶತಮಾನದ ಆರಂಭ ಕಾಲದಲ್ಲಿ ಪ್ರಯತ್ನಿಸಿದ ತ್ರಿಮೂರ್ತಿಗಳಲ್ಲಿ ಹ.ನಾ. ಒಬ್ಬರು (ಇನ್ನಿಬ್ಬರು-- ಎಸ್. ಜಿ. ನರಸಿಂಹಾಚಾರ್, ಬಿ. ಎಂ. ಶ್ರೀ). ಆದ್ದರಿಂದ 'ಆಂಗ್ಲ ಕವಿತಾವಳಿ' ಯಲ್ಲಿ ಬಂದ ಎಲ್ಲ ಕವನಗಳನ್ನು ಇಲ್ಲಿ ಕೊಟ್ಟಿದೆ. ಇಂಗ್ಲಿಶ್ ಮೂಲಗಳು ಹೇಗೂ ಪಂಡಿತಾರಾಧ್ಯರ ಗ್ರಂಥದಲ್ಲಿ ಲಭ್ಯವಿವೆ. ಆದಾಗ್ಯೂ ಮಾದರಿಯಾಗಿ ಕೆಲವನ್ನು ಮಾತ್ರ ಅನುವಾದ ಕವನಗಳ ಕೆಳಗೆ ಕೊಟ್ಟಿದೆ.

(--ಸಂ)

## ೧. ಆಂಗ್ಲ ಕವಿತಾವಳಿ

ಈ ಪದ್ಯದಲ್ಲಿ ಆಂಗ್ಲರ ಕೆಲವು ಪ್ರಸಿದ್ಧ ಕೃತಿಗಳನ್ನು ಅನುವಾದಿಸಿ ಹಾಕಿದೆ. ಯುಕ್ತವಾಗಿ ಕಂಡಂತೆ ಅಲ್ಲಲ್ಲಿ ಕೆಲವು ಅಂಶಗಳನ್ನು ಲೋಪಿಸಿ, ಇನ್ನು ಕೆಲವನ್ನು ಬದಲಿಸಿದೆ. ಕನ್ನಡದ ಛಂದಸ್ಸಿನಲ್ಲಿ ಪೂರ್ವಿಕರು ಆಗಾಗ್ಗೆ ನೂತನ ರೀತಿಗಳನ್ನು ಹುಟ್ಟಿಸಿದರು. ಈಗಲೂ ಹೊಸ ಮಾರ್ಗಗಳನ್ನೇಕೆ ತೆರೆಯಬಾರದೆಂದು ಸರಳ ಕಾವ್ಯಪ್ರಿಯರು ಕೇಳುತ್ತಾರೆ. ಈ ಪದ್ಯಗಳಲ್ಲಿ ಪ್ರಾಸವನ್ನು ತೊರೆಯದಿದ್ದರೂ ಪೂರ್ವಕವಿಗಳ ನಿಯಮಗಳನ್ನು ಸೂಕ್ಷ್ಮವಾಗಿ ಅನುಸರಿಸಿಲ್ಲ. ಆದಕಾರಣ ವೃತ್ತಗಳಿಗೆ ಹೆಸರು ಹಾಕಿಲ್ಲ. ಬೇಕಾದರೆ ಶಿಥಿಲಕಂದ, ಶಿಥಿಲರಗಳೆ ಎಂಬಂತೆ ಹೆಸರುಗಳನ್ನು ನಿರ್ಮಿಸಬಹುದು.

## (೧) ಸುಭಾಷಿತ ಕಲಾಪ

(ಶೇಕ್ಸಪಿಯರನ ನಾಟಕಗಳಿಂದ)

(ಒಂದು)

ನರಲೋಕವೆಲ್ಲ ನಾಟಕ ಶಾಲೆಯಂತಿರುತ
　　ಪುರುಷ ವನಿತೆಯರು ಬರಿಯಾಟದವರು;
ಮೆರೆದವರು ನಿಷ್ಕ್ರಮಿಸಿ ಹೆರರು ಪ್ರವೇಶಿಸುತ
　　ಪರಿಪರಿಯ ವೇಷಗಳ ನಟಿಸುತಿಹರು.
ಆರಬ್ಧಿಯಲ್ಲಿ ಕೂಸು, ತಾಯ ಕೈಯಲಿ ಮಲಗಿ
　　ಚೀರುತ್ತ ಕಾರುತ್ತ ಹೊರವಡುವುದು
ತೋರುವನು ಹುಡುಗನಾಮೇಲೆ ನಡೆ ಮಠಕೆನಲು
　　ಮೋರೆ ತೊಳಕೊಂಡಳುತ ಚೀಲ ಹಿಡಿದು
ತರುವಾಯ ಯುವಕನಂಗಜನ ತಾಪವ ಸಹಿಸಿ
　　ತರುಣಿಯರ ಕೃಪೆಗೆ ಹಂಬಲಿಸುತಿಹನು
ಬಿರು ನುಡಿಯ ಬಲ್ಬಂಟ ಯಶದ ಬುದ್ಬುದವೆಳಸಿ
　　ಧುರದಲುರಿಗುಂಡುಗಳನೆದುರಿಸುವನು.
ಮರುಜೋಹ ಸೂಕ್ತಿ ಸಾಮಾನ್ಯ ಪ್ರಮಾಣಗಳ
　　ನೆರೆಯರಿತ ಖರದೃಶಿ ನ್ಯಾಯಮೂರ್ತಿ
ಸ್ವರಗುಂದಿ, ಮೈಸುರ್ಕಿ, ಮೂಗಿನಲಿ ಕನ್ನಡಿಯ
　　ಧರಿಸುವನು ಭರತನಾರನೆಯ ಸರ್ತಿ.
ಎರಡನೆಯ ಕೂಸುತನ ಚರಮ ಪ್ರವೇಶದಲಿ,
　　ಬರಿ ಮರವೆ ಕವಿದೆಲ್ಲ ನಷ್ಟವಹುದು,
ಇರದು ಹಲ್ಲಿರದು ಕಣ್ಣಿರದು ರುಚಿ ಜಠರದಲಿ
　　ನರದಶಾಸಪ್ತಕ ಸಮಾಪ್ತವಹುದು.

–As you like it VII

### ಇಂಗ್ಲಿಶ್ ಮೂಲ

All the world's a stage,
And all the men and women merely players ;
They have their exists and their entrances ;
And one man in his time plays many parts,
His acts being seven ages.
At first the infant,
Mewling and puking in the nurse's arms ;
Then the whining school-boy, with his satchel,
And shining morning face; creeping like snail
Unwillingly to school.
And then the lover,
Sighing like furnace, with a woeful ballad
Made to his mistress' eyebrow. Then a soldier,
Full of strange oaths, and bearded like a bard
Jealous in honour, sudden and quick in quarrel,
Seeking the bubble reputation
Even in the cannon's mouth.
And then the justice,
In fair round belly with good capon lin'd,
With eyes severe, and beard of formal cut,
Full of wise saws and modern instances;
And so he plays his part. The sixth age shifts.

Into the lean and slipper'd pantaloon
with spectacles on nose and pouch on side
His youthful hose, well sav'd, a world too wide
For his shrunk shank; and his big manly voice
Turning again toward childish treble, pipes

And whistles in his sound

Last scene of all,

That ends this strange eventful history,
Is second childishness and mere oblivion;
Sans teeth, sans eyes, sans taste, sans everything.

(ಎರಡು)

ಅತಿ ಚಿತ್ರ ಸುಸ್ವರದ ಬಲ, ವನದ ಹರಿಣಾಶ್ವ
ತತಿಕೊಬ್ಬಿ ಕೂಗಿ ನೆಗೆದೋಡುತಿರಲು,
ಶ್ರುತಿಸಿದರೆ ಭೋರೆಂದು ತುತ್ತೂರಿಯ ನಿನದವನು,
ಗತಿ ನಿಲಿಸಿ ಕೇಳುವುವು, ಮಲೆ ಕರಗಲು

ಮರದಂತೆ ಕಲ್ಲಿನಂತುಬ್ಬರದ ತೊರೆಯಂತೆ
ಇರುವರೂ ಸುಸ್ವನಾಧೀನರೆಂದು,
ಒರೆದರುತ್ಪ್ರೇಕ್ಷೆಯಲಿ ತುಂಬುರದ ಗಾಯನಕೆ
ತರುಶಿಲಾ ನದಿಗಳೂ ಒಲಿದುವೆಂದು,

ಅರಿತಿರನು ಸಂಗೀತ ವಶನಾಗನದಕೆಂಬ
ನರನ ನಂಬಿಕೆಯಿಂದ ಮೋಸವಹುದು,
ನರಕದಂತವನ ಮನ, ಚೋರ ಕರ್ಮ ದ್ರೋಹ,
ದುರುಪಾಯಗಳಿಗಾಶ್ರಯವ ಕೊಡುವುದು.

**Merchant of Venice V, i**

(ಮೂರು)

ಕರುಣರಸ ಹಿಂಡಿ ತೆಗೆಯುವುದಲ್ಲ, ದಿವದಿಂದ
ಸುರಿವ ಶೀಕರದ ಸ್ವಭಾವಿಯಹುದು,

ಹರಸಿ ಹದುಳಿನಲಿರಿಸಿ ನೀಡುವನ ಪಡೆಯುವನ
ಎರಡು ಗುಣದಿಂದ ಸುಕೃತಾರ್ಥವಹುದು.
ಹಿರಿಯರಲಿ ಹಿರಿದು, ಗದ್ದುಗೆ ಮಕುಟಗಳಿಗಿಂತ
ಅರಸರಲಿ ಮಿಗಿಲೆನಿಸಿಯೊಪ್ಪುತಿಹುದು
ನರಪತಿಯ ದಂಡ ಲೌಕಿಕ ವಿಭವ ಲಾಂಛನವು
ಗರಿಯ ಸಾಧ್ವಸಗಳಿಗೆ ಪೀಠವಹುದು.
ಕರುಣವೀ ದಂಡಾಂಕಿತ ಪ್ರಭುತ್ವಕೆ ಮೇಲು
ಧರಣಿಪರ ಹೃದಯದಲಿ ಪಟ್ಟವದಕೆ,
ಕರುಣದಿಂದವರು ಕಟು ಧರ್ಮ್ಯತೆಯನೊಗ್ಗಿಸಲು
ಪರಮೇಶನೀಶತೆಯ ಸಾಮ್ಯವದಕೆ

--Merchant of Venice, V, I

(ನಾಲ್ಕು)

ಮರುಳನೋಪನು ಸುಕವಿ ಕಲ್ಪನೆಯ ಮೂರ್ತಿಗಳು
ಇರದಮಿತ ಛಾಯೆಗಳು ಹುಚ್ಚಾಗಿಹವು
ಗರವಟಗೆಯೋಪನಿಗೆ ಬೇಡತಿಯ ಮೋರೆಯಲಿ
ಸುರರನಿಳ್ಕುಳಿಗೊಳುವ ರತಿಯ ಚೆಲುವು

ಕವಿಯ ಕಣ್ಣಿಂದದಾವೇಶದಿಂದುರುಳಾಡಿ
ದಿವದೊಳಗು ಬುವಿಯೊಳಗು ತಿರುಗುತಿಹುದು,
ಅವಿಷಯವ ಕಲ್ಪನೆಯು ರೂಪಿಸಲು ಲೇಖಣಿಕೆ
ನವಧಾಮ ನಾಮಗಳನೊದಗಿಸುವುದು

--A Midsummer Night's Dream, V, i

ಇಂಗ್ಲೀಶ್ ಮೂಲ

The lunatic, the lover, and the poet
Are of imagination all compact :
One sees more devils than vast hell can hold:
That is the madman ; the lover all as frantic,
Sees Helen's beauty in a brow of Egypt ;

The poet's eye, in a fine frenzy rolling,
Doth glance from heaven to earth, from earth to
heaven;
And, as imagination bodies forth
The forms of things unknown, the poets pen
Turns them to shapes, and gives to airy notings
A local habitation and a name.

(ಐದು)

ಜಾತಿಮತ ಬೇರಾದರೇತಕ್ಕೆ ಶತ್ರುತ್ವ
ನೂತನ ಪ್ರತನ ಮಾರ್ಗಸ್ಥರಾರು ?
ಆತನಿಗು ಕಣ್ಣು ಕೈಯಾತನಿಗು ನೇತ್ರಕರ
ಚೇತನೇಂದ್ರಿಯ ಗುಣಗಳಿರದರಾರು?

ಕಾಯ ಪೋಷಣದಲ್ಲಿ, ನೋಯಿಸುವ ರುಜೆಯಲ್ಲಿ,
ಮಾಯಿಸುವ ತೆರದಲಿತರತ್ವವೆಲ್ಲಿ
ಗಾಯ ಮಾಡಲು ರಕುತ, ಕಟ್ಟಾಡಿಸಿದರೆ ನಗೆ,
ಸಾಯರೇ ವಿಷದಿಂದ, ಭೇದವೆಲ್ಲಿ ?

--Merchant of Venice, III, i

(ಆರು)

ರಕ್ಕಸನ ಬಲ ಮಿಗಿಲೆ, ಆದರದನವನಂತೆ
ಇಕ್ಕುವನು ಲೋಗರನು ಹಿಂಸಿಸುವನು;
ಅಕ್ಕುಡರು ಸುಡಿಲಗರೆದರೆ ವಿಬುಧರಾಣ್ಮನೇ
ಒಕ್ಕಲಿಕ್ಕದೆ ಸುಮ್ಮನೆಂತಿರುವನು?

ಸುರಪತಿ ಸಿಡಿಲಿನಿಂದ ಹೆಮ್ಮರಗಳನು ಸೀಳಿ
ಕಿರಿಯ ಗಿಡಗಳನುಳಿಸಿ ಕರುಣಿಸುವನು;
ನರನಲ್ಪಪದವಿಯಲಿ ಮಂಡಿಸಲು ಹೆಕ್ಕಳಿಸಿ
ಸುರರೆದುರೆ ಮಂಗಾಟವಾಡುತಿಹನು

–Measure for Measure II, ii

(ಏಳು)

ನೀರಮೇಲಣ ಪಾಚಿಯಂತೆ ಕೆಲವರ ಮನವ
ಗೌರವದ ಮೌನ ಬಯಲಾಗಗೊಡದು;
ಆರು ನಮ್ಮಿಂದುಗುವ ದೇವವಾಣಿಗೆ ಬೊಗಳ
ಬಾರದೆಂಬಾದೇಶದಂತಿರುವುದು

ಆನನದ ಭಾವದಿಂದಲೆ ವಿಜ್ಞರೆಂದೆನಿಸಿ
ಏನನುಸಿರದೆ ಹೆಸರ ಪಡೆಯುತಿಹರು ;
ಮೌನಬಿಟ್ಟರೆ ತಮ್ಮ ಕಿವಿಗೆ ಕಂಟಕವೆಂದು
ಮೌನಿಗಳು ಕಿವುಡತನ ಲೇಸೆನುವರು.

–Merchant of Venice, I, i

(ಎಂಟು)

ಭಾನುಧೃಷ್ಟರ ಕಿಸಿದ ಕಣ್ಣಿಗರಿದಾದ ಪರಿ
ಜ್ಞಾನವಭ್ಯಾಸಿಗಳಿಗೊಳಗುಗೊಡದು;
ಮಾನಕಧ್ಯಯನದಲಿ ಮುಳುಗಿದರೆ ಲಿಖಿತಗಳ
ಆನಿಕೆಯ ಬಿಟ್ಟು ಬಹು ಲಾಭವಿರದು.
ತಾರೆಗಳ ಹೆಸರರಿಯದವನು ಬಾನ್ಬೆಳಕಿನಲಿ
ದಾರಿ ನಡೆದಂತೆ ಓದಾಳಿಯಹನು,
ಮೀರಿ ಕಲಿತರೆ ಮೆರಹು ಬೇರೆ ಸಲ್ಲದು ತಿಳುಹು
ಸೂರಿಗಳ ಮತಿಗೆ ಹೊಣೆಗಾರನಹನು

**--Love's Labour Lost, I, i**

ಇಂಗ್ಲಿಶ್ ಮೂಲ

Study is like the heaven's glorious sun,
That will not be deep-search'd with saucy looks ;
Small have continual plodders ever won,
Save base authority from other's books;

These earthly godfathers of heaven's lights,
That give a name to every fixed star,
Have no more profit of their shining nights
Than those that walk and wot not what they are.

(ಒಂಬತ್ತು)

ದೀವಟಿಗೆಗಳ ಪರರ ಹಿತಕೆ ಹೊತ್ತಿಸಿದಂತೆ
ದೇವರು ಮನುಷ್ಯನನು ಯೋಜಿಸುವನು;
ಸೇವೆಯಿಂದುತ್ಕೃಷ್ಟ ಕಾರ್ಯಗಳ ಸಾಧನಕೆ
ಜೀವಿಗುತ್ತಮ ಶಕ್ತಿ ಪಾಲಿಸುವನು.

ಲೋಭಿ ಪ್ರಕೃತಿ ದೇವಿ, ಸರ್ವಶಕ್ತಿಪ್ರದಳು,
ಲಾಭವೆಣಿಸದೆಯೊಂದು ಕಾಸ ಕೊಡಳು
ಆಭರಿತ ವೃದ್ಧಿಯೊಡನವಳ ಸಾಲವ ತೆರಲು
ಶೋಭಿಸುವ ವರಗಳನು ನೀಡುತಿಹಳು.

**--Measure for Measure, I, i**

ಇಂಗ್ಲೀಶ್ ಮೂಲ

Heaven doth with us as we with torches do,
Not light them for themselves ; for if our virtues
Did not go forth of us. 'twere all alike
As if we had them not.
Spirits are not finally touch'd
But to fine issues ; nor nature never lends
The smallest scruple of her excellence
But, like a thrifty goddess, she determines
Herself the glory of a creditor
Both thanks and use.

(ಹತ್ತು)

ಅರಿತವಗೆ ಸಂಕಷ್ಟ ಸುಖಲಾಭದವಕಾಶ
ದೊರೆಯುವುದು ಮಣಿಫಣಿಯ ಶಿರಸಿನಲ್ಲಿ;
ಮರಗಳಲಿ ಮಾತವನಿಗುಪಲಗಳಲುಪದೇಶ,
ಒರತೆಗಳಲೋದು, ಶುಭ ನೋಡಿದಲ್ಲಿ

**--As you like it. II, i**

ಇಂಗ್ಲೀಶ್ ಮೂಲ

Sweet are the uses of adversity ;
Which like the toad, ugly and venomous
Wears yet a precious jewel in his head ;
And this our life, exempt from public haunt,
Finds tongues in trees, books, in the running
brooks,
Sermons in stones, and good in everything.

(ಹನ್ನೊಂದು)

ಘನವೇಷ್ಟಿತಟ್ಟಾಲ, ವೈಭವದ ರಾಜಕುಲ,
ಅನರಗೃಹ, ಧರಿಣಿಯೇ ನಿತ್ಯವಿರವು
ಕನಸಿನಾಭಾಸಗಳ ಪರಿಯಲೀ ರಚನೆಗಳು
ಘನದಂಶದನಿತಿರದೆ ವಿಲಯಿಸುವುವು.

**–Tempest IV, I**

## (೨) ನಂದನ

(ಮಿಲ್ಟನ್‌ನಿಂದ)

ತೊಲಗು ಚಿಂತೆಯ ವಿಕಟ ಗುಹೆಯೊಂದು ನಿನಗಿರಲಿ
ಗೆಲವಿರದೆ ಬಲಿದ ಕತ್ತಲೆ ಅಲ್ಲಿ ಕವಿದಿರಲಿ
ತೂಂಗಿದರೆ ಗಲ್ಲುಗಳ ಮರೆಗೆ ಬೇಗನೆ ಹಾರು
ತಿಂಗಳಿಗೆ ಹಿಂಗಿ ಮಬ್ಬಿನ ಗೂಗೆಗಳ ಸೇರು

ಬಾ ಬೇಗನಂದೆ ನೀ ನೆದೆಯ ಹದುಳಿನ ದೇವಿ
ತಾ ಬರುತ ಹಾಸ್ಯ ಬಾಲೆಯ ಮುದಗಳನೋವಿ.

ಚಲ್ಲ ಚಕ್ಕಂದ ಚೇಷ್ಟೆಯ ಕೇಳಿ ಬಿನದಗಳ
ಗಲ್ಲದಿನಿಕುಣಿಕೆಗಳ ನಗೆಯಲರ ಜೊಂಪೆಗಳ
ಎರಡು ಬದಿಗಳ ಹಿಡಿದು ಗಹಿಗಹಿಸುವಿತಿಹಾಸ
ಬರುತ ತಾ ನಿನ್ನೊಡನೆ ಪರಿ ಪರಿಯ ಸುವಿಲಾಸ.

ಮಿಡಿಗಾಲಿನಲಿ ಜಿಗಿದು ಲೋಲಗತಿಯಿಂದ ಬಾ
ಒಡನೆ ಆ ಸ್ವಾಚ್ಛಂದ್ಯ ದೇವಿಯನು ಕರೆದು ತಾ
ನಿಮ್ಮ ಸಾರಾಧಿಸುವ ವೃಂದದಲಿ ನನ್ನನಿಡು
ಸಮ್ಮತಿಸಿ ನಿರ್ದೋಷ ಛಂದಗಳ ಸಿದ್ಧಿಗೊಡು.

ನಸುಕಿನಲೆ ಹೊರ ಹಾರಿ ಬಾನಿನಟ್ಟಳೆಯಿಂದ
ನಿಸೆಯನೆಚ್ಚರಿಸಿ ತಟ್ಟನೆ ತೂಕಡಿಕೆಯಿಂದ
ಚಿತ್ರಾಂಗ ದರುಣನುದಯಿಸಲೆನ್ನ ತೋಟದಲಿ
ಮಿತ್ರನಂತಭಿನಂದಿಸುವ ಭರದ್ವಾಜದುಲಿ

ಕತ್ತಲೆಯ ಪಡೆಯಟ್ಟಿ ಹೇಂಟೆಗಳ ಮೆಚ್ಚಿಸುತ
ಒತ್ತಿ ನಿಗುರುತ ನಡೆವ ಕೋಳಿಗಳ ಹರ್ಷರುತ
ಬೆಳಗನೆಬ್ಬಿಸುವ ಬೇಟೆಯ ನಾಯಿಗಳ ಗೀಳು
ಬಿಳಿಮಂಜಿನಲಿ ಗುಡ್ಡಗಳು ಕೊಡುವ ಮರುಸೂಳು.

ಮೂಡಿದುಜ್ಜ್ವಲ ಸೂರ್ಯನೋಲಗದಲೊಪ್ಪುವುದ
ಮೋಡಗಳು ಪರಿಪರಿಯ ತೊಡಿಗೆಗಳ ಧರಿಸಿದುದ
ನೋಡಿ ಹೊಲದಲಿ ಹೋರೆಗಳ ಗೈಯುವರ ಹಾಡು
ಈಡಿಲ್ಲದೀ ಪರಿಯ ಬಿನದಗಳ ಬರ ಮಾಡು

ಸುತ್ತಲಿನ ಭೂರೂಪದಲಿ ಕಣ್ಣು ಚರಿಸುತಲೆ
ಚಿತ್ತ ಹರಿಸುವ ಬೇರೆ ಶೋಭೆಗಳ ಕಂಡ ನೆಲೆ
ಮೇಯುವಾಕಳು ಕುರಿಗಳಿರುವ ಹಸಿ ಬಯಲುಗಳು
ಹಾಯುವಬುದಗಳಿರುವ ಬರಿಮೈಯ ಬೆಟ್ಟಗಳು
ಮೊರೆದು ಹರಿಯುವ ತಟನಿ ವನಜಭೂಷಿತ ಸರಸಿ
ಬುರುಜು ತೆನೆಗಳ ಕೋಟೆ ತೋರಿದರೆ ಚಲುವರಸಿ

ನೆರೆಯ ಗುಡಿಲಿನ ಮೇಲೆ ಸುಳಿಯುತಿಹ ಬಿಳಿಯ ಹೊಗೆ
ಹೊರಗೆ ದಿಂಕಿಡುವ ಕಿರಿಹಸುಳೆಗಳ ಸವಿಯ ನಗೆ

ಜನಭರಿತ ನಗರಗಳು ಬಿನದಗಳಿಗಧಿವಾಸ
ದಿನ ತಪ್ಪದಲ್ಲಿ ದೊರೆವುದು ಹಬ್ಬದುಲ್ಲಾಸ
ವ್ಯಾಸವಾಲ್ಮೀಕಿಯರ ವರ ಕಥಾನಾಯಕರು
ಮಾಂಸವಸನಾಚ್ಛಾದದಲಿ ನಟಿಸಿ ತೋರುವರು

ಆಹವಾಭ್ಯಾಸದಲಿ ಕೆಯ್ದುಕಾರರ ಕೆಯ್ಮೆ
ರಾಹುತರು ಮಾವತರು ತೋರಿಸುವ ಬಲು ಜಾಣ್ಮೆ
ಮೆರವಣಿಗೆಗಳ ಹೊಳಪು ವಾದ್ಯಗಳ ಮೊಳಗಾಟ
ಗರತಿಯರ ಸಂಗೀತ ಹುಡುಗಿಯರ ಕೋಲಾಟ

ಇವುಗಳಾನಂದವನು ಪಾಲಿಸುವ ಋದ್ಧಿಯೇ
ಸವಿ ನಿನ್ನ ಶುಶ್ರೂಷೆ ಸೌಭಾಗ್ಯ ಸಿದ್ಧಿಯೇ

ಮೂಲ ಶೀರ್ಷಿಕೆ --L' Allegro

## (೨) ಚಿಂತನ

(ಮಿಲ್ಟನ್‌ನಿಂದ)

ತೊಲಗು ಹೃದಯವ ಮರುಳುಗೊಳಿಸುವಾಮೋದವೇ
ಸಲಹುವಳು ನಿನ್ನನೊಬ್ಬಳು ಜನನಿ ಮೋಹವೇ
ಸ್ಥಿರಚಿತ್ತ ನಿನ್ನಾಟದೊಡವೆಗಳ ನೀಗುವುದು
ಬರಿಯ ಸೋಮಾರಿಗಳ ಬಗೆ ನಿನಗೆ ಸಲ್ಲುವುದು
ರವಿಕಿರಣದಲಿ ಕುಣಿಯುವಗಣಿತ ಕಣಗಳ ಪರಿ
ವಿವಿಧ ಕಲ್ಪನೆಗಳನು ತುಂಬುವುದೆ ನಿನಗೆ ಸರಿ

ಜಯತು ಚಿಂತಾದೇವಿ ಸುವಿವೇಕಿ ಶುದ್ಧಮತಿ
ಜಯತು ಗಂಭೀರಾಸ್ಯೆ ನಿಯತಾಕ್ಷಿ ವಿನಯವತಿ
ಸಮಪದದ ಮಂದಗತಿಯಿಂದ ವೈಭವವೆರಸಿ
ಸುಮನರಲಿ ಸಂಸರ್ಗಬದ್ಧ ದೃಷ್ಟಿಯನಿರಿಸಿ
ಧ್ಯಾನಪರ ನೇತ್ರಗಳಲಾತ್ಮವಡಗಿರುವಂತೆ
ತಾನೆನುವ ಬೋಧವಿಲ್ಲದ ಶಿಲಾಕೃತಿಯಂತೆ
ತಿರೆಯಲವತರಿಸಿ ತಣ್ಣಗೆ ನೋಡಿ ನಡೆದು ಬಾ
ಬರುತ ಜೊತೆಯಲಿ ಶಾಂತಿ ವಿಶ್ರಾಂತಿಗಳನು ತಾ ॥

ಜಪದ ತುಷ್ಟಿಯನುಂಬ ಕೃಶತುನುವಿನುಪವಾಸ
ಉಪವನಗಳಲಿ ತಿರುಗಿ ಸುಖಿಸುವ ನಿರಾಯಾಸ
ಪರಿದೀಪ್ತಿಯ ಲೋಕದಲಿ ಚರಿಸುವ ಧ್ಯಾನ
ಊರಿನಲಿ ಧರ್ಮವರ್ಧಕ ಭಿಕ್ಷುಗಳ ಗಾನ
ದುಡಿದು ಹಗಲೆಲ್ಲ ಬಯ್ಗಿನಲಿ ಬಡವರು ಸೋತು
ಗುಡಿಲುಗಳ ಸೇರಿ ಮಕ್ಕಳನಾಡಿಸುವ ಮಾತು.

ಕೆರೆಯ ತಡಿಯಲಿ ದೇವಕುಲದ ಘಂಟಾಸ್ವನಿತ
ಇರುಳಿನಲಿ ಕೋಗಿಲೆಯ ವಿಲಪನದ ಮಧುರರುತ
ಚಿಂತನೆಗೆ ವಿಹಿತವಿದು ನಿಃಶಬ್ದ ರಜನಿಯಲಿ
ಇಂತಿರುವ ಸಹಕಾರಿಗಳು ನಿನಗೆ ಜೊತೆಯರಲಿ.

ವ್ಯೋಮದಾರಣ್ಯದಲಿ ದಾರಿ ಮರೆತವನಂತೆ
ರೋಮಪಟದಿಂದ ತಲೆ ಬಗ್ಗಿ ಸಿಣಿಕುವಂತೆ
ಮೋಡಗಳ ಹಿಂದೆಸೆವ ನಡುವಿರುಳ ಚಂದಿರನ
ನೋಡುತ್ತ ನುಣ್ಬಾಯಲಿನಲಿ ಮಂದ ಪರ್ಯಟನ.

ಉಡುಗತಿಯನಟ್ಟದಿಂ ವೀಕ್ಷಿಸುತ ಜಾಗರಣ
ಸೊಡರನುರಿಸುತ ಪಠನದೊಳಗಾತ್ಮವಿಸ್ಮರಣ ||

ಶ್ರುತಿಯಲುಪದಿಷ್ಟ ಪರಮಾರ್ಥದ ರಹಸ್ಯಗಳ
ಸ್ಮೃತಿ ಪುರಾಣೋಕ್ತ ಸುಂದರ ಬೋಧ ಚರಿತಗಳ
ಇತಿಹಾಸದಲಿ ಧರ್ಮರಕ್ಷಣ ಮರ್ಮವನು
ಅತಿಗಳೆದು ನಡೆಯುವರ ದಂಡನದ ರೀತಿಯನು
ಕರುಣಪ್ರಧಾನ ನಾಟಕ ಕಥಾಯೋಜನವ
ಗುರುಭಾವಗಳ ಮನದಲೆಬ್ಬಿಸುವ ಗಾಯನವ
ಚಿಂತಿಸುತ ಮತ್ತೆ ಭಾವಿಸುತ ಗುಪ್ತಾರ್ಥವನು
ಇಂತು ನಾನಾ ಪರಿಯಲಿರುಳೆಲ್ಲ ಕಳೆಯುವೆನು ||

ಬೆಳಗು ಮುಗಿಲನು ತಳೆದು ಬರಲು ಮರುತನು ಬೀಸಿ
ಗಳಗಳನೆ ಮಳೆಹನಿದು ಹೋಗಲೆಲೆಗಳ ನನಸಿ
ಉರಿಗದಿರುಗಳ ಸುರಿಯುವಿನನ ಪ್ರತಾಪದಲಿ
ಕಿರುವೆಳಗಿನುಪವನದ ಸಂಶ್ರಯವು ನನಗಿರಲಿ
ವಟಶಾಖೆಗಳ ತೋರಣಾವಳಿಯ ನೆಳಲಿನಲಿ
ಅಟನ ಪಥಗಳು ಮಂದ ವಿಹರಣಕೆ ನೀಳ್ದಿರಲಿ

ಅಲ್ಲೊಂದು ತೊರೆಯ ಬಳಿ ಹೊಳಪು ನುಸುಳಲು ಬಿಡದೆ
ನಿಲ್ಲುವಾಸರೆಯೊಳಗೆ ಪಾಮರರು ಕಣ್ಣಿಡದೆ
ನೀರು ಗುಳುಗುಳಿಸಿ ಹೂಗಳ ಬಂಡನುಣಿಕೆಯಲಿ
ಆರಡಿ ಮೊರೆಯತಿರಲು ಮಂದನಿದ್ರೆಯು ಬರಲಿ
ಅನಿಲ ನಿಭರೂಪಗಳ ರಂಜಿಸಿ ಸ್ವಪ್ನದಲಿ
ವನದೇವಿ ಸುಸ್ವನವ ಜಾಗರದಲೆಬ್ಬಿಸಲಿ.

ಆಗಾಗ ಪಠನಿರತ ಯತಿನಿಲಯಗಳ ಕಡೆಗೆ
ಸಾಗಗೊಡು ಭಕ್ತಿಯಿಂದೆನ್ನ ಕಾಲಿನ ನಡಿಗೆ
ಕಂಬಗಳದಿಂಡು ಮೇಲ್ಮುಚ್ಚಳದ ನಿಡು ನಿಲುವು
ತುಂಬ ಕೆತ್ತಿದ ದಾರಬಂದ ಕದಗಳ ಚೆಲುವು
ಭಕ್ತಿ ಪೂರಕ ಮಂದದಿನರುಚಿಯ ಗಾಂಭೀರ್ಯ
ಸೂಕ್ತ ಪಾಠವ ಕೇಳಿದಾನಂದದೌದಾರ್ಯ

ಇದನೆಲ್ಲ ಚಿಂತಿಸಿ ಸ್ವರ್ಗವಿದಿರಿಗೆ ಬರಲಿ
ಮುದಿತನದಲೆನಗೆ ಮುನಿ ಪದವಿಯೇ ಪ್ರಾಪ್ತಿಸಲಿ

ಮೂಲ ಶೀರ್ಷಿಕೆ : **IL Pensereso**

## (೪) ನಿತ್ಯಸುಖ

### (ಹೆನ್ರಿ ವೊಟನ್‌ನಿಂದ)

ಪರರ ತುಷ್ಟಿಗೆ ಮಣಿಯದವನ ಸುಖಕೆಣೆಯೆಲ್ಲಿ
ಸರಲ ಭಾವದ ಕವಚದಂತೆ ರಕ್ಷಣವಲ್ಲಿ
ಸತ್ಯಶೀಲತೆ ನಿತ್ಯ ಸುಖಿಗೆ ಬಲು ಜಾಣತನ
ಭೃತ್ಯರಂತರ್ಪಿಸುವುವಿಂದ್ರಿಯಗಳಾಳುತನ
ನರರ ಭಣಿತದ ಭೀತಿಯೆಂಬ ಸಂಕಟವಿಲ್ಲ
ಮರಣಕಂಜದೆ ಸಿದ್ಧನಾಗಿರದ ದಿನವಿಲ್ಲ
ಭಾಗ್ಯದಭ್ಯುದಯದಭಿಲಾಷೆಯವನೊಳಗಿಲ್ಲ.
ಯೋಗ್ಯತೆಯನಗಲಿದ್ದೈಸಿರಿಗೆ ಮತ್ಸರವಿಲ್ಲ
ಸುತ್ತಿಕೇಳಿ ದುಮ್ಮಾನದಿರಿತ ತಾಳುವುದಿಲ್ಲ.
ಓತವನಲ್ಲದೆ ರಾಜನೀತಿ ಬಲ್ಲವನಲ್ಲ
ಜನವಾದದಾಳಿಕೆಗೆ ಸೆರೆಯಿರದ ಹೃದಯದವ
ಮನದ ನಿಜ ವಿಶ್ರಂಭವಾಶ್ರಯಿಸಿ ನಿಲ್ಲುವವ
ವಂದಿಮಾಗಧರವನ ಗೌರವವ ಹೆಚ್ಚಿಸರು

ನಿಂದಕರು ಮನೆಯ ಮುಣುಗಿಸಿ ಧನವ ಕೂಡಿಸರು
ವಿಶ್ವ ಚಿಂತನ ಪಠನ ಸದಯೋಕ್ತಿಗಳಿಗೊಲಿದು
ಈಶ್ವರಾರ್ಪಿತ ಸುಕೃತಗಳಲಿ ಮನ ನಲಿಯುವುದು

ಮೂಲ ಶೀರ್ಷಿಕೆ : Character of a Happy Life

ಇಂಗ್ಲಿಶ್ ಮೂಲ

How happy is he born or taught
That serveth not another's will;
Whose armour is his honest thought,
And silly truth his highest skill !

Whose Passions not his masters are
Whose soul is still prepared for death;
United unto the world with care
Or Princely love or vulgar breath;

Who hath his life from rumours freed,
Whose conscience is his strong retreat
Whose state can neither flatterers feed;
Nor ruin make accusers great;

Who envieth none whom chance doth raise
Or vice; who never understood
How deepest wounds are given with praise
Nor rules of State, but rules of good;

Who God doth late and early pray
    More of his grace than gifts to lend;
Who entertains the harmless day
    with a well-chosen book or friend

This man is free from servile bonds
    Of hope to rise or fear to fall;
Lord of himself; though not of lands
    And having nothing he hath all.

## (೫) ಆಳು ಬೀರತನೇ

(ಜೇಮ್ಸ್ ಥಾಮ್ಸನ್‌ನಿಂದ)

ಈಗ ಆಂಗ್ಲೇಯರು ಸ್ವದೇಶಭಕ್ತಿಯ ಗೀತೆಗಳನ್ನು ಉತ್ಸಾಹದಿಂದ ಹಾಡುವರು. ಕಾರಣವು ಸರ್ವರಿಗೆ ತಿಳಿದೇ ಇದೆ. ಟೊಮ್ಸ್‌ನ್ ಕವಿಯ ರೂಲ್ 'ಬ್ರಿಟೆನ್ನಿಯಾ' ಪ್ರಸಿದ್ಧ ಗೀತವನ್ನು ಕೆಳಗೆ ಕನ್ನಡಿಸಿ ಹಾಕಿದೆ. ಪ್ರಾಚೀನ ಸಂಸ್ಕೃತದಲ್ಲಿ ತನಾ=ಸಂತತಿ.*

ಬೀರತನೆ ದಿವೌಶಸಾಥನಾಜ್ಞೆಯಿಂದ ಮೊದಲಲೇ
ನೀರಧಿಯ ಸುನೀಲಕಾಯದಿಂದ ಹೊರಡುವಾಗಲೇ
ಅವಳ ರಾಷ್ಟ್ರಕಿತ್ತ ಶಾಸನೋಕ್ತಿಗಳನು ಹಾಡುತ
ದಿವಿಜರಿಂತು ಘೋಷಿಸಿದರು ಸದಯರಾಗಿ ನೋಡುತ ॥

---

*ಇದೇ ಕವಿತೆಯನ್ನು ಬಿ.ಎಂ.ಶ್ರೀ ಅವರು 'ಆಳೌ ಬ್ರಿಟಾನಿಯಾ' ಹೆಸರಿನಲ್ಲಿ ಅನುವಾದಿಸಿದ್ದಾರೆ. (ನೋ. 'ಇಂಗ್ಲೀಶ್ ಗೀತಗಳು')

ಆಳು ಬೀರತನೇ ಆಳು ವೀಚೆನಿಷ್ಠ ರಾಷ್ಟ್ರವ
ತಾಳರೆಂದು ಬೀರತನಯರವನಿಯೊಳಗೆ ದಾಸ್ಯವ||

ನಿನ್ನ ಪರಿವರಗ್ರಹೀತರಲ್ಲದನ್ಯಲೋಗರು
ಪನ್ನದರಸರಡಿಯ ದಾಸರಾಗದೆಂದು ಹೋಗರು
ಅವಿರತ ಸ್ವತಂತ್ರ ಮಹಿಮೆಗಳಲಿ ನೀನು ಬೆಳೆಯುವೆ
ಅವರು ಹೆದರಿ ಮತ್ಸರಿಸುವ ಪದವಿಯಲ್ಲಿ ನಿಲ್ಲುವೆ ||

ಅನ್ಯರೊಮ್ಮೆ ಜಯಿಸಿದರೆಯು ತೇಜಮೀರುತೇಳುವೆ
ಇನ್ನು ಬಲಿತ ಭೀಷಣ ಪ್ರಭಾವದಿಂದ ಬಾಳುವೆ
ಮೋಡಗಳಲಿ ಹಾವಳಿಯನು ಮಾಡುತಿರುವ ಮರುತನು
ತೀಡಿ ನಿನ್ನ ಹೆಮ್ಮರಗಳನೂರಿ ನಿಲ್ಲಗೊಡುವನು ||

ನಾಡುಗಳಲಿ ರಾಜವಿಭವ ನಿನ್ನ ಭಾಗ್ಯವಾಗಲಿ
ಬೀಡುಗೊಂಡು ನಗರಗಳಲಿ ವಾಣಿಯತನವೊಪ್ಪಲಿ
ಉದಧಿಯ ವಿಸ್ತಾರವೆಲ್ಲ ನಿನಗಧೀನವಾಗಲಿ
ಅದರ ಮಧ್ಯವಿರುವ ತಟಗಳೆಲ್ಲ ನಿನಗೆ ಸೇರಲಿ||

ವಾಣಿ ಸರ್ವದಾ ಸ್ವತಂತ್ರದೆಡೆಯ ಬಯಸುತಿರುವಳು
ತಾಣಗಳಲಿ ಧನ್ಯವೆಂದು ನಿನ್ನ ತಟಕೆ ಬರುವಳು
ಧನ್ಯತಮ ದ್ವೀಪ! ಅತುಲ ಸುಂದರತೆಯ ಧರಿಸುವೆ
ಮಾನ್ಯ ಸುಂದರಿಯರ ವೀರಗೋಪರಿಂದ ಮೆರೆಯುವೆ ||

ಆಳು ಬೀರತನೇ ಆಳು ವೀಚಿನಿಷ್ಠ ರಾಷ್ಟ್ರವ
ತಾಳರೆಂದು ಬೀರತನಯರವನಿಯೊಳಗೆ ದಾಸ್ಯವ||

## (೬) ಭಾವಗಣ

(ವಿಲಿಯಮ್ ಕಾಲಿನ್ಸ್‌ನಿಂದ)

ಕೃತಯುಗದಲೊಂದು ದಿನ ಸಂಗೀತದಧಿದೇವಿ
ಅತಿ ಪಟುತೆಯನು ತೋರಿ ಹಾಡುತಿರಲು
ಕುತುಕಪೂರಿತ ಭಾವಮೂರ್ತಿಗಳು ಬಂದಲ್ಲಿ
ಧೃತಿಹೀನವಾದುವು ಶ್ರುತಿಸುತಿರಲು॥೧॥

ಗೀತದಾವೇಶದಿಂದಾದ ಪರವಶತೆಯನು
ರೀತಿ ರೀತಿಯಲೊಡನೆ ಕಾಣಿಸಿದುವು
ನೇತಿರಿಸಿದಲ್ಲಿಯ ಸುವಾದಿತ್ರಗಳ ಹಿಡಿದು
ಆತುರಿಸಿ ಬಾಜಿಸಲು ಮುಂಬರಿದುವು ॥೨॥

ಮೊದಲು ಭಯ ತನ್ನ ಚಳಕವ ನೋಡ ವೀಣೆಯಲಿ
ಗದಗದ ನಡುಗಿ ಮಿಡಿದು ತಂತಿಗಳು
ಉದಿತ ನಿನದವ ಕೇಳಿ ಕೆಮ್ಮನಾಕ್ಷಣದಲ್ಲಿ
ಬೆದರಿ ನಿಲ್ಲಿಸಿತು ಗಡ ಬಾಜನೆಯನು॥೩॥

ಕಿಡಿಗಳನು ಹಾರಿಸುತ ಕಿಸುಗಣ್ಣುಗಳ ಕೋಪ
ತಡೆಯದಾ ಗಡಣದೊಳಗವ್ವಳಿಸಿತು
ತುಡುಕಿ ಪರಿವಾದಿನಿಯ ಭರಭರನೆ ತಂತಿಗಳ
ಬಡಿಯುತ್ತ ಝಾಡಿಸುತ ಸಂಭ್ರಮಿಸಿತು ॥೪॥

ಗುರುಭಾವಮಿಶ್ರಿತ ವಿಚಿತ್ರ ಸ್ವರೋದಯವು
ಅರೆಗಳಿಗೆ ತಗ್ಗಿ ಬಳಿಕತಿಶಯಿಸುತ
ಕರುಣರಸವನು ತೋರಿಸಿತು ನಿರಾಶೆಯ ರಾಗ
ಮರವೆಯಿಂದಾಧಿಗಳ ಸಂತವಿಸುತ ॥೫॥

ಚಾರುನೇತ್ರಗಳ ಪ್ರತೀಕ್ಷೆ ಮನವಲರಿಸುತ
ದೂರದ ಪದಾರ್ಥಗಳನಭಿವದಿಸಿತು
ಅರಣ್ಯತರು ಶಿಲಾದರಿಗಳಾಮಂತ್ರಣಕೆ
ಮಾರುದನಿಗೈಯಲದು ವಿಸ್ತರಿಸಿತು ||೬||

ನಕ್ಕು ಮನವೊಲಿದು ಪುನರಪಿ ಬಾಜಿಸುತ್ತಿರಲು
ಪಕ್ಕದಲಿ ವಿದ್ವೇಷ ಪುಟನೆಗೆಯಿತು
ಒಕ್ಕೊಟ್ಟು ಕೈಯಿಂದ ರಕ್ತಲಿಪ್ಸಾಸಿಯನು
ಧಕ್ಕೆ ರಣಕಹಳೆಗಳ ಸೂಳಯಿಸಿತು ||೭||

ನಡು ನಡುವೆ ಬಳಿಯಿದ್ದ ದೈನ್ಯ ಮನಕರಗಿಸುವ
ಬಡ ಹಾಡಿನಲಿ ದಯೆಯ ಬಿನ್ನವಿಸಿತು
ಬಿಡದದಕೆ ವಿದ್ವೇಷ ಬಿರಿಗಣ್ಣುಗಳ ಬಿಡುತ
ಕಡಗಿದಾವೇಶವನು ಹೊಡಕರಿಸಿತು||೮||

ಆವ ರಾಗವನಯಯಿಸದೆ ರತಿಮಾತ್ಸರ್ಯ
ಲಾವಣಿಯ ಬಾಜಿಸಿತು ಮರುಕಗೊಳುತ
ಭಾವದ್ವಯಕೆ ಸೋತು ಕಾಮಕೋಪಗಳಿಂದ
ಡಾವರಿಸಿತಂತರ್ಯದಲಿ ಕರಗುತ ||೯||

ದೇವಿಯಾವೇಶಬಂದಂತೆ ಕಣ್ಣುಗಳೆತ್ತಿ
ಆ ವೇಳೆ ಚಿಂತೆ ಕುಳಿತಿದ್ದಿತಲ್ಲಿ
ಸಾವಕಾಶದಿ ಕೊಳಲನೂದಿ ಹೃದಯದ ಪೂರ್ಣ
ಭಾವವನು ಸುರಿಯಿತಾ ವಾದ್ಯದಲ್ಲಿ ||೧೦||

ಸುತ್ತಲಿನ ಶಿಲೆಗಳಿಂದೊಗೆದುಬಹ ಹಳ್ಳಗಳು
ಮೆತ್ತನೆ ಶ್ರುತಿಯ ಕೂಡಿಸಿದುವದಕೆ

ಸುತ್ತಿ ವನಪಥಗಳಲಿ ಸಾವಗಿಸಿತಾ ಸ್ವರವು
ಇತ್ತು ಗಂಭೀರಶಾಂತತೆಯ ಮನಕೆ ||೧೧||

ಅದೊ ಚಿತ್ರವೆನಿತು ಪ್ರಸನ್ನತೆ ಉಷೋವರ್ಣೆ
ಮಧುರತರ ಮುರಲಿಯನು ನುಡಿಸುತಿರಲು
ಹೊದರುಹ ಹಳುಗಳ ತುಂಬಿ ಅಪ್ಸರರ ಮೃಗಯುಗಳ
ಹೃದಯವನು ಸುಸ್ವರವು ನಲಿಸುತಿರಲು ||೧೨||

ಕಡೆಯಲಾಗಡಣದಲಿ ಹರ್ಷಭರಸಾರಂಗಿ
ಓಡಿದೆಬ್ಬಿಸಿತು ಸುಖದ ಲಹರಿಗಳನು
ಸಡಗರಿಸಿ ಶೃಂಗಾರ ಹಾಸ್ಯಗಳು ನರ್ತಿಸುತ
ಅಡಗಿಸಿದುವಿತರಾನು ಚಿಂತೆಗಳನು ||೧೩||

ಮೂಲ ಶೀರ್ಷಿಕೆ The Passions

## (೭) ಸಮಾಧಿಗತ ಗ್ರಾಮಸ್ಥರು

(ಥಾಮಸ್ ಗ್ರೇ-ನಿಂದ)

ಗ್ರಾಮದ ಗುಡಿಯಲಿ ಘಂಟಾಸ್ವನ ರವಿ ಉಗಮುವ ಸಾರುವುದು
ಗೂರ್ಮಿಸುವಾಕಳ ಹಿಂಡು ಬಯಲಿನಲಿ ಮೆಲ್ಲನೆ ಸುಳಿಯುವುದು
ದಣಿದೊಕ್ಕಲುಮಗ ಮನೆಯನೆ ಲಕ್ಷಿಸಿ ಜಗ್ಗುತ ನಡೆಯುವನು
ಗಣಿಸದೆ ಲೋಗರನನ್ನನು ಕತ್ತಲೆ ಮುಸುಕಲು ಬಿಟ್ಟಿಹನು ||೧||

ಅದೊ ಮಿಣುಗುಟ್ಟುತ ಭೂಮಿಯ ರೂಪವು ನೋಟಕೆ ಮಸಳುವುದು ।
ಅದಿರದೆ ವಾತಾವರಣವು ಗಭೀರ ಶಾಂತತೆ ತಳೆದಿಹುದು
ಇಲ್ಲೆನಲಾ ಝೇಂಕರಿಸುವ ಚೀರಿಕೆ ಸುತ್ತುತ ಹಾರುವುದು
ಎಲ್ಲಿಯೊ ಕುರಿಮಂದೆಗೆ ಕಿಂಕಿಣಿ ರವ ನಿದ್ದೆಯ ಬರಿಸುವುದು ||೨||

ಅಂತಲ್ಲದೆಯೂ ತರುರುಹಗುಂಠಿತ ಮಸ್ತಕದಟ್ಟದಲಿ
ಮಂತಣವಿಲ್ಲದೆ ತಾನೇ ಆಳುವ ಪೂರ್ವದ ತಾಣದಲಿ
ಗೋಪ್ಯ ಕುಟಿಯ ಬಳಿ ಹೆರವರು ಸುಳಿದರೆ ಕಾಡಿದ ತಪ್ಪಿತಕೆ।
ಸಪ್ಪನೆ ಕುಳಿತಿಹ ಗೂಗೆ ಹಿಮಾಂಶುಗೆ ದೂರವುದಾಕ್ಷಣಕೆ ||೩||

ಆ ಮುರುದೊಡಲಿನ ತಪನೀಮರದಾ ಕರಿಬೇವಿನ ಕೆಳಗೆ
ಭೂಮಿಯ ಕವಿದಿಹ ಕುಸಿಗುಪ್ಪೆಗಳಲಿ ಹಸುರು ಹೊದಿಕೆಯೊಳಗೆ
ಕಿರಿನೆಲ ಮನೆಗಳಲವರವರನಂತ ಕಾಲಕೆ ಮಲಗಿರುತ
ಬರಿಗಾವಿಲರೆನಿಸಿದ ಬಹು ಪೂರ್ವಜರಿರುವರು ನಿದ್ರಿಸುತ ||೪||

ನರಸುಯ್ ಸೂಸುವ ಬೆಳಗಿನ ಜಾವದ ಗಾಳಿ ಕರೆಯುತಿರಲಿ
ಕಿರಿಕಲ್ಲಂಚಿಯ ತೃಣಗೃಹದಲ್ಲಿಯ ಚಿವು ಚಿವು ಕೇಳಿಸಲಿ
ಕೋಳಿಯ ತುತೂರಿ ಬೇಟೆಯ ಕೊಂಬಿನ ಮರುದನಿ ಘೋಷಿಸಲಿ
ಏಳರು ಹಾಸಿಗೆಯಿಂದಾ ಬಡವರು ಬರುವ ದಿವಸಗಳಲಿ ||೫||

ಇನ್ನಿಲ್ಲವರಿಗೆ ಚಳಿಯಲಿ ಹಸನಿಯ ಬೆಂಕಿಯನುರಿಸುವುದು
ಇನ್ನಿಲ್ಲುದ್ಯಪ್ಯಿ ಗೇಹಿನಿ ಸಾಯಂಸೇವೆಯ ಮಾಡುವುದು
ಸಂಜೆಯಲಪ್ಪನು ಬರುತಲೆ ಮಕ್ಕಳು ತೊದಲಾಡುವುದಿಲ್ಲ
ಅಂಜದೆ ಕೂಗುತ ಮಂಡಿಯ ಹತ್ತುತ ಮುದ್ದುಗೊಳುವುದಿಲ್ಲ ||೬||

ಮರಳಿ ಮರಳಿ ಕುಡುಗೋಲಿನ ಕಡಿತಕೆ ಬೆಳೆಯನು ಪಡೆದವರು
ತಿರುಗಿ ತಿರುಗಿ ಬಿರುನೆಲವನು ನೇಗಿಲ ಸಾಲಿನಲೊಡೆದಿಹರು
ಹೊಲದೊಳಗೇರ್ಗಳ ಹೊಡೆಯುವ ಸಮಯದಲವರ
ಹರುಷವೆನಿತು ||೭||

ಮಲೆಯಲಿ ಮರಗಳ ಕಡಿಯುವ ಹೋರೆಯಲವರ ಬಲುಮೆಯೆನಿತು
ಸಿರಿಗಾಟಿಸುವರು ಲೋಕಹಿತಕೆ ದುಡಿದರನೇಡಿಸದಿರಲಿ
ನಿರಸ ಹರುಷಗಳ ನವಿಶದ ಭಾಗ್ಯವನವ ಹೇಳಿಸದಿರಲಿ
ಬಡವರ ಬಾಳಿನ ಬರಿಯ ಕಿರಿಯ ಕಥೆಗಳನಾಕರ್ಣಿಸಲು
ಕಡು ವಿಭವದ ದೊರೆ ನಗದಿರಲವರಲಿ ಪರಿಭವ ತೋರಿಸಲು ||೮||

ವಂದಿಗಳುಸುರುವ ಕೈಯ್ವಾರವು ವಿಭುಪದದಾಡಂಬರವು
ಸುಂದರ ರೂಪವು ಧನಸಮೃದ್ಧಿಯ ನೀಡಿದಖಿಲಫಲವು
ಆರಿಗು ತಪ್ಪದ ಕಡೆಯ ಮುಹೂರ್ತವನೆದುರಲಿ ಕಾಣುವುವು
ಭೂರಿಮಹಿಮೆಗಳ ದಾರಿಗಳೆಲ್ಲವು ಮಸಣಕೆ ಸಾಗುವುವು ||೯||

ಚರಿತವ ಕೆತ್ತಿಸಿ ಜೀವಿತಸನ್ನಿಭ ಮೂರ್ತಿಯ ನಿಲ್ಲಿಸಲು
ಸರಿದಸು ಮುಂಚಿನ ಗೇಹಕೆ ಬರುವುದೆ ಪುನರಪಿ ತಿಷ್ಠಿಸಲು
ನುಡಿಯದ ಮೃತ್ತಿಕೆ ಮಾನವನರ್ಪಿಸಿದರೆ ಚೇತರಿಸುವುದೆ
ಜಡಶೀತಲ ಶವ ಚಾಟುವಚನಗಳ ಕೇಳಿ ಸುಖಿಸಲಹುದೆ ||೧೦||

ಗಮನಿಸದೀಸ್ಥಳದೊಳಗೆ ಮಹಾತ್ಮರು ನಿದ್ರಿಸುತಿರಬಹುದು
ಸುಮನರ ತೇಜವೆ ತುಂಬಿದ ಹೃದಯದ ತಾಪಸರಿರಬಹುದು
ಕೆಲವರಿಗಧಿರಾಷ್ಟ್ರಗಳಾಳುವ ಕೈ ಬಲವಿದ್ದಿರಬಹುದು
ಹಲವರು ಕವಿತೆಯಲಾನಂದದ ಭರವೆಬ್ಬಿಸಿರಲು ಬಹುದು ||೧೧||

ಆದರೆ ಬಹುಕಾಲಾರ್ಜಿತ ವಿದ್ಯೆಯ ವಿಪುಲ ಗ್ರಂಥವನು
ಓದಲು ತೋರಿಸಲಿಲ್ಲವರೆದುರಿಗೆ ಸರಸತಿ ತೆರೆದದನು
ಬಡತನವವರಲಿ ಧೀರೋತ್ಸಾಹದ ವೃದ್ಧಿಯನಡಗಿಸಿತು
ಕಡುಚಳಿಗಡ್ಡೆಯ ಕಟ್ಟಿಸುವಂತದರೋಘವ ನಿಲ್ಲಿಸಿತು ||೧೨||

ಅತಿ ನಿರ್ಮಲ ಭಾಸುರಕರ ಶೋಭಿತ ರತ್ನಗಳಲಿ ಹಲವು
ಅತಲ ಸ್ಪರ್ಶ ತಮೋವೃತ ಸಾಗರ ಗರ್ಭದಲಡಗಿಹವು

ಮಾನವ ದೃಷ್ಟಿಗೆ ಕಾಣದೆ ಕುಸುಮಗಳೆಷ್ಟೋ ಬೆಳೆಯುವುವು
ಕಾನನದಲಿ ರಂಜಿಸಿ ಪರಿಮಳವನು ಬರಿದೇ ಬೀರುವುವು ||೧೩||
ಎದೆ ಅದಿರದೆ ಬಡವರ ಸತ್ಯದ ಪರಿಪಾಲಿಸಲಮ್ಮುವರು
ಎದುರಿಸಿ ಹಳ್ಳಿಯ ಪೀಡಕರನು ಸ್ವತಂತ್ರಿಕೆ ಕಾದುವರು
ಬರೆಯದೆ ಕೀರ್ತಿಯ ಪಡೆಯದೆ ಜನರಧಿಕಾರವ ಕಾಯುವರು
ಇರಬಹುದಿವರೊಳು ರಕ್ತವ ಸುರಿಯದೆ ರಾಷ್ಟ್ರವ ಭಜಿಸುವರು ||೧೪||

ಪರಿಣತ ಸಂವಾದಗಳೊಲುಮೆಯ ಕರತಾಲವ ಕೇಳುವುದು
ಪರಿಪೀಡನ ಧನಮಾನ ವಿನಾಶನ ಭಯವನು ಮರೆಯುವುದು
ನಗೆಮೊಗೆದವನಿಯ ಮೇಲೆ ಸಮೃದ್ಧಿಯ ಪಸರಣವೆಸಗುವುದು
ಸೊಗದ ಚರಿತವನು ಜನತೆಯ ಮೊಗದಲಿ ದಿಟ್ಟಿಸಿ
ಹಿಗ್ಗುವುದು ||೧೫||

ಇಂತಹ ಭಾಗ್ಯದ ಕಾಣದವರ ಗತಿ ಕುತ್ಸಿತವಿರಲಿಲ್ಲ
ಚಿಂತಿಸಲವರಪಕರ್ಮನಿಚಯ ಸಂವರ್ಧಿಸುತಿರಲಿಲ್ಲ.
ರಕುತದ ಹೊನಲಲಿ ರಾಜಪದದ ಕಡೆಗವರು ನಡೆಯಲಿಲ್ಲ.
ಸಕಲ ಮನುಜನು ಕೃಪೆಯಧಿವಾಸದ ಹೊರಗೆ ಕಳುಹಲಿಲ್ಲ. ||೧೬||

ಅರಿದಿಹ ಸತ್ಯವ ಮಾಜಿಸಿ ಹೃದಯದ ವೇದೆಯ ಪಡಲಿಲ್ಲ.
ದುರಿತದಲುದಿಸಿದ ನಿಜ ಲಜ್ಜೆಯ ಸಡುಗಿಸಯತ್ನಿಸಲಿಲ್ಲ.
ದರ್ಪದ ಸುಖಜೀವಿಗಳಾಲಯದಲಿ ಸೇವೆಯನಾಚಸಿರಿ
ಅರ್ಪಿಸಲಿಲ್ಲ ಸುಕವಿತಾ ಸೃಷ್ಟಿಯ ಸರ್ಜರಸವನುರಿಸಿ ||೧೭||

ಮರುಳಾಟದ ಕಿರಿ ಕಚ್ಚಾಟದ ಜನಸಂಕುಲದೊಳಗಿರದೆ
ಸ್ಥಿರವಿರಿಸಿದರವರೆದೆಯಲಿ ಬಗೆಗಳನಡ್ಡಾಡಲುಗೊಡದೆ
ಭವದೊಳಗೊಂದು ವಿವಿಕ್ತದರಿಯ ತಣ್ಣೆಳಲಲಿ ಬಾಳಿದರ
ವ್ಯವಹಾರದಲುಪಶಾಂತ ಚರಿತ ಸರಣಿಯ ಕಾಪಾಡಿದರು||೧೮||

ಮೂಲ ಶೀರ್ಷಿಕೆ
-Elegy written in a country church yard

## (೮) ಗರ್ವ ನಿರ್ಣಯ

### (ಜೇನ್ ಟೇಲರ್ ಕೃತ)

ಎತ್ತಿದ ಹುಬ್ಬಿನ ಮುರ್ಕಿನ ಮೋರೆಯ
ಗೊತ್ತು ತಿಳಿಯುವರು ಗರ್ವಕೆ ಸರ್ವರು
ಇಮ್ಮನೆ ನೋಡುವ ಲಘು ಮುಖಚರ್ಚೆಯ
ಹಮ್ಮು ಹೃದಯದೊಳಡಗಲು ಕಾಣರು
ಮನದಲಿ ಹೊಂಚಿರುತಲ್ಲಿಯೆ ಕೆಡಕನು
ಅನವರತಂ ಮಾಡುವ ಬಗೆ ಹೊಸತದು
ಅಹಮಭಿಮಾನದ ನಾನಾ ಪರಿಯನು
ಬಹು ವಿಧದಲಿ ಹುಡುಕದೆ ನಮಗರಿಯದು
ಅಪಮಾನವ ಸುಮ್ಮನೆ ತರಹರಿಸುತ
ಅಪಹರಿಸಿದುದನು ಬಿಟ್ಟು ಕೊಡುವೆಯಾ
ಬೆದರಿಸಿದರೆ ಹೃದಯದಲನುಮತಿಸುತ
ತದಕಲು ತಪ್ಪಿಗೆ ತಲೆದೂಗುವೆಯಾ
ಅಪವಾದಕೆ ಶೀಘ್ರದಲಹುದೆನ್ನುತ
ನೆಪ ಹೇಳದೆ ತರ್ಕವ ತೋರುವೆಯಾ
ನ್ಯಾಯಕೆ ಬಿರುನುಡಿ ಸುಮ್ಮನೆ ತಿನ್ನುತಾ
ನೋಯದೆ ನಿನ್ನಭಿಮತ ಹೇಳುವೆಯಾ
ವಾದಿಸಿ ವಿಜಯಕೆ ಹಟತಟಮಾಡದೆ
ಆದರಿಸುತ ಪರಮತ ಕೇಳುವೆಯಾ
ಕಿರಿಯರ ಮಾತಿಗೆ ಹೀಗಳೆದಾಡದೆ
ಹಿರಿಯನ ಪರಿ ಹೆಕ್ಕಳಿಸದಿರುವೆಯಾ
ಪರಿಹಾಸದ ವಚನಕೆ ಮನ ಮುರಿಯದೆ
ಸರಸದಿ ಕೆಳೆಯರ ಸೇರಿ ನಗುವೆಯಾ

ನೀತ ಮನದಲಿರುತೇತಕು ಮುನಿಯದೆ
ಮಾತು ತಿಳಿದರೂ ಸೋತುಬಿಡುವೆಯಾ
ಈ ಪರಿ ಹೃದಯದ ಮರ್ಮ ಹುಡುಕಿದರೆ
ಗೋಪಿತ ಗರ್ವವು ಬಯಲಿಗೆ ಬರುವುದು
ಸರ್ವ ಕಲಂಕರಹಿತ ತಾನೆಂದರೆ
ಗರ್ವವನೊಪ್ಪಲು ಬಿಡದ ಗರ್ವವದು

## (೯) ಮುಗಿಲು

( ಶೆಲ್ಲಿ ಕೃತ)

ವಾರಿಧಿ ನದಿಗಳಲೆದ್ದು ಕುಸುಮಗಳ
ಆರಿದ ಬಾಯಿಗೆ ಹೊಸಮಳೆಗರೆಯುವೆ
ನಡುಹಗಲಲಿ ತೂಕಡಿಸುವ ಕುಡಿಗಳ
ಒಡಲಿನ ಹೊದಕೆಗೆ ನೆಳಲನು ಕವಿಸುವೆ ||೧||

ತರುಗಳ ಕರಕಾಹತಿಯಲಿ ಮೊರೆಯಿಸಿ
ಮರುತನ ಮೇಲೇರಾಟವ ಮಾಡುವೆ
ಗೂಡುಗಳಲಿ ಹಕ್ಕಿಗಳನು ತೋಯಿಸಿ
ಓಡಿ ಗದರಿ ಕದಕದಸಿ ನಗಾಡುವೆ ||೨||

ಕುಂಚದೆ ಗಿರಿಪುರಸರಗಳ ತುಳಿಯುತ
ಮಿಂಚನು ದಾರಿ ಬೆಳಗಿಸಲು ಹೂಡುವೆ
ಕಡಲಲಿ ವರುಣನ ಕುಣಿತಕೆ ನಲಿಯುತ
ಉಡುಗಳ ನಗೆಯನು ಪವಡಿಸಿ ನೋಡುವೆ ||೩||

ಹೊಂಗರಿಗಳನುದ್ಗಮದಲಿ ಮೆರೆಯಿಸಿ
ಕೆಂಗದಿರನು ನನ್ನಂಗಕೆ ನೆಸೆವನು
ಉರಿಬೆಟ್ಟದಲೆರಕೆಗಳನು ಪಸರಿಸಿ
ಗರುಡನೆರಗಿದಂತೆಸಕವಿರಿಸುವನು ||೪||

ಕಂತುವ ರವಿ ವಿಶ್ರಾಂತಿಯ ರಾಗದಿ
ಅಂತರವಾಸದ ಯವನಿಕೆ ಬಿಡುತಲೆ
ಇಕ್ಕೆಯ ಸೇರಿದ ಕಲರವದಂದದಿ
ರೆಕ್ಕೆ ಮಡಿಚಿ ನಿಲ್ಲುವೆನಾಗಸದಲೆ ||೫||

ಇರುಳಿನಲೆನ್ನಯ ಶಿಬಿಕೆಯ ಪಟವನು
ಸುರರೇ ಕೇಳುವ ಪರಿ ಶಶಿ ಮೆಟ್ಟುತ
ಇರಿಯಲು ತುಪ್ಪಟದಾ ನೆಲವನು
ಕಿರುನಗೆಯುಡುಗಳು ನೋಡುವುವಿಣಿಕುತ ||೬||

ಹೊನ್ನಿನ ತುಂಬಿಗಳಂತವು ಸುಳಿಯಲು
ನನ್ನಲಿ ಹಾಸ್ಯವ ತುಳುಕಿಸುತಿರುವುವು
ಅಂಬುಧಿ ನದಿಗಳ ಕಡೆಯಲಿ ನೋಡಲು
ಅಂಬರದೊಡನವು ಬಿದ್ದಂತಿರುವುವು ||೭||

ಬೆಂಗದಿರನ ಬಿತ್ತರಿಗೆಗೆ ಮಿಸುನಿಯ
ಇಂಗದಿರಗೆ ಮುತ್ತಿನ ಗುಡಿ ಕಟ್ಟುವೆ
ಮರುತನ ಹಾರಿಸಲೆನ್ನ ಪತಾಕೆಯ
ಗಿರಿಗಳನಡಗಿಸಿ ಭಗಣವ ನಟ್ಟುವೆ ||೮||

ನಗಗಳ ಮೇಲಕೆ ಚಪ್ಪರವಡರಿಸಿ
ಖಗಕರಗಳನೊತ್ತರಿಸೀಡಾಡುವೆ
ಸುರಧನು ವರ್ಣದ ತೋರಣವೇರಿಸಿ
ಮೆರೆಯುತ ವಿಜಯೋತ್ಸವವನು ಮಾಡುವೆ ||೯||

ಧರೆ ಹುಟ್ಟಿಸುವುದು ದಿವ ಪೋಷಿಸುವುದು
ತಿರೆ ಶಿರಧಿಗಳ ಸಮಾಧಿಯ ಸೇರುವೆ
ಅತಿ ಮಾಯಿಕ ಜೀವನ ಶಾಶ್ವತವಿದು
ಕ್ಷಿತಿಯೊಳಗಿಂಗುತನಂತದಲೇರುವೆ ||೧೦||

ಮೂಲ ಶೀರ್ಷಿಕೆ : The Cloud

## (೧೦) ನಭ
### (ಶೆಲ್ಲಿ ಕವನ)

ಜಗದ ನಿರಭ್ರ ತಮಿಸ್ರ ಪಟಲವದು
ಅಗಣಿತ ದೀಪಗಳುರಿಯುವ ದಿವವದು

ಗನಾಮಿತ ಶಾಶ್ವತ ವಿಸ್ತೃತಿಯದು
ಇಹ ಬಹ ಕಳೆದೆಲ್ಲವುಗಳ ಮನೆಯದು
ತೇಜದ ವಪುಗಳ ರಂಗನಿಲಯವದು
ಒಜೆಯಲುಡುಗಳು ಹಾರುವ ಹೊಲವದು
ಕೇತುಗಳಡಗಿ ವಿಹರಿಸುವ ದರಿಯದು
ಸೀತಲ ಚಂದ್ರಮರಲೆಯುವ ವನವದು
ಪುರುಷನ ವಿಗ್ರಹದಲಿ ತಾರಕೆಗಳು
ಶಿರಗಳಲಾಡುವ ರುಧಿರದ ಕಣಗಳು
ಹೂಗಳಲೆರಗಿದ ಹನಿಯೆಂಬಂತವು
ಆಗಸದಲಿ ಮಿಣುಗುತ ನಿಂತಿರುವ್ವವು
ಕಂದರರದಲಿ ಮುತ್ತುವ ಕೀಟಕಗಳ
ಅಂದದಿ ಬೀಡದು ಕವಿ ಕಲ್ಪನೆಗಳ
ಕನಸಿನಲೆಣಿಸಿದ ಹರುಷದ ಭುವನಕೆ
ಕನಕದ ಮುಖವದು ಭಕ್ತ ನಿವೇಶಕೆ
ಅದಕೆ ನರರು ವಿಬುಧಾಲಯವೆಂದರು
ಹೆದರುತ ಕೋರುತಲಾರಾಧಿಸಿದರು
ನಿರ್ಜರರನು ಮುದಿಯಾಗಿಸಿ ಕಾಲನು
ಊರ್ಜಿತ ದಿವವನು ನರೆಯಿಸಲಾರನು

ಮೂಲ ಶೀರ್ಷಿಕೆ : **Ode to Heaven**

ಇಂಗ್ಲಿಶ್ ಮೂಲ :

Palace-Roof of cloudless nights !
Paradise of golden lights !
    Deep, immeasurable , Vast,
Which art now and which wert then
    Of the Present and the Past
Of the eternal Where and When,
    Presence-chamber, temple, home
    Ever-canopying dome,
    Of acts and ages yet to come!
Glorious Shapes have life in thee,
Earth, and all earth's company ;
    Living globes which ever throng
Thy deep chasms and wilderness,
And green worlds that glide along;
And swift stars with flashing tresses;
    And icy moons most cold and bright
    And mighty suns beyond the night
    Atoms of intensest light
Even thy name is as a God
Heaven! for thou art the abode
Of that power which is the glass
Wherein man his nature sees
Generations as they pass
Worship thee with bended knees
Their Unremaining gods and they
Like a river roll away
Thou remainest such always.

## (೧೧) ಭಾವನೆ
(ಕೀಟ್ಸ್ ಕೃತ)

ಭಾವನೆಯ ಬಿಚ್ಚಿಬಿಡು ಹೊರಗಣ್ಣು ನೋಡಿದರೆ
ಆವ ರಮಣೀಯತೆಗೆ ತಪ್ಪುವುದು ನಿಯತ ಜರೆ

ಮಧುಮಾಸದಾನಂದ ಹೂಗಳೊಡನಳಿಯುವುದು
ವಿಧುಕರಣಗಳ ಸೊಬಗು ಮುಗಿಲುಗಳಲಡಗುವುದು

ನೋಡಿದುದ ನೋಡಿದರೆ ಮೋಹಿಸುವ ಕಣ್ಣೆಲ್ಲಿ
ಬಾಡದಂತಹ ಕದಪು ದಂತ ಮೌಕ್ತಿಕವೆಲ್ಲಿ

ಕೇಳಿದುದ ಕೇಳಿದರೆ ಸವಿಮಾತಿಗಿಂಪೆಲ್ಲಿ
ಹೇಳಿದುದ ಹೇಳಿದರೆ ಕಥೆಯ ರಂಜನವೆಲ್ಲಿ

ಆವ ಸುಖ ವೃಷ್ಟಿಯಲಿ ಬುದ್ಬುದದ ಪರಿಯಲ್ಲ
ಭಾವನೆಯ ಹಾರಗೊಡು ವಿರತಿಯಲಿ ಸುಖವಿಲ್ಲ

ಅದರ ಮಾಹಾತ್ಮ್ಯವೆನಿತೆಂದು ಬಣ್ಣಿಸಬಹುದು
ಒದಗಿದ ಶಿಶಿರದೊಳಗೆ ಚೈತ್ರವನು ಬರಿಸುವುದು

ಕವಿದ ಕಾರ್ಮುಗಿಲನೋಡಿಸಿ ನೀಲನಭದೊಳಗೆ
ರವಿಯ ಮೂಡಿಸಿ ಮುದವ ನೀಡುವುದು ತಾವರೆಗೆ

ಸೇವಂತಿಗೆಯ ಸೊಬಗು ಮಲ್ಲಿಗೆಯ ನರುಗಂಪು
ಆವಾಗಲೂ ತಪ್ಪದದಕೆ ಮಾವಿನ ಸೊಂಪು

ಅನುಭವಕೆ ವಿಧಿಬದ್ಧ ಹರ್ಷಗಳು ದೊರೆಯದಿರೆ
ಅನಿರುದ್ಧ ಭಾವನೆಗೆ ಮನದ ಪಂಜರದ ತೆರೆ

ಮೂಲ ಶೀರ್ಷಿಕೆ -- The Realm of Fancy

## (೧೨) ಧನ್ಯವೀರ

(ವರ್ಡ್ಸ್‌ವರ್ತ್ ವಿರಚಿತ )

ಧನ್ಯವೀರನ ಗುಣಗಳೆಂತೆಂಬ ಮರ್ಮವನು
ಅನ್ಯ ಭಟರವನಂತೆ ಮೆರೆಯಲೆಂದೊರೆಯುವೆನು

ಎಳೆತನದಲೆಣಿಸಿದಾಕಾಂಕ್ಷೆಗಳನನುಸರಿಸಿ
ಬೆಳೆದ ಮೇಲುತ್ಕೃಷ್ಟ ಕರ್ಮಗಳನಳವಡಿಸಿ

ಅಂತರ್ಯದಲಿ ಮಹಾಯತ್ನಗಳ ಚಿಂತಿಸುತ
ಮುಂತಿರುವ ಪಥವನಾ ಚಿಂತನದಿ ಬೆಳಗಿಸುತ

ಭಯ ದುಃಖಘಾತಗಳ ಸಂಸರ್ಗದೊದವಿನಲಿ
ನಯನೀತಿ ಹಿತಗಳನು ಕಾಯುವನೆ ಧನ್ಯ ಕಲಿ

ವಿಪದಗಳ ಮುರಿದವಕೆ ವಿಕಟರೂಪವನಳಿಸಿ
ಅಪಗುಣಗಳನು ತೆಗೆಯುತುಪಯೋಗಗಳನುಳಿಸಿ

ಹೃತ್ತಲದಲನುಕಂಪ ಕೆಡುವ ಪ್ರಸಂಗದಲಿ
ಮತ್ತು ಕರುಣಾಶಾಲಿಯಾಗುವನು ಕುಶಲಕಲಿ

ಎಡರಿನಲಿ ತಾಳ್ಮೆಯನು ಮೋಹನದಲಮಲತೆಯ
ಪಡೆವನವಸರಗಳಲಿ ವರಸಾಂತ್ವನೀಯತೆಯ

ಅಪಕಾರಕಪ್ರಕೃತಿ ಪ್ರತಿಬಂಧವಲ್ಲೆಂದು
ಉಪಕಾರವೇ ರಾಷ್ಟ್ರಹಿತದ ನಿಜಬುಡವೆಂದು

ನ್ಯಾಯವವನಿಗೆ ನೇಮ ನೀತಿನಂಬಿಕೆಯಾಪ್ತ
ಆಯುತ್ತ ಸರ್ವಜಯ ಧರ್ಮದಿಂದಪ್ರಾಪ್ತ

ಸರಲಗತಿವಿಡಿದುಚ್ಚ ಪದವಿಗಳ ಹತ್ತುವನು
ಇರಲಿಲ್ಲ ಪೂಜ್ಯಭಾವವ ಹಿಡಿದು ನಿಲ್ಲುವನು.

ಏಕಚಿತ್ತನು ರಕ್ಷ್ಯಧರ್ಮ ಬಿಡುವವನಲ್ಲ.
ಲೋಕವಿಶ್ರುತಿ ವಿತ್ತಗಳಿಗೆ ನಿಲುಕುವನಲ್ಲ

ವಿಭವ ಮಾನಗಳವನ ಬೆನ್ನು ಹಿಡಿಯಲು ಬೇಕು
ನಭದಿಂದ ಸುರಿವ ಸುಮವೃಷ್ಟಿಯಂತಿರಬೇಕು

ಲೌಕಿಕದ ಧುರಗಳಲಿ ಸಾಮದಾಚಾರದಲಿ
ಹಾಕುತೆಲ್ಲರ ತನ್ನ ಗುಣ ಸಿರಿಯ ಜಾಲದಲಿ

ಗುರುಸಂಧಿ ಬರಲು ನವವರನಂತೆ ಸುಖವಡೆದು
ಹುರಿಯ ದೈವವೆ ತುಂಬಿದಂತೆ ತೇಜವ ತಳೆದು

ಧುರದ ಸಂರಂಭದಲಿ ನಿಶ್ಚಲ ನಿಯಮಗಳನು
ವಿರಿಸಿ ಬಹುವಿಘ್ನಗಳಿಗೀಡಾಗಿ ನಿಲ್ಲುವನು

ತುಮುಲದಲಿ ನಿಜಗುಣದಿ ಘಟಕನಾಗೊಪ್ಪುವನು
ಕಮನೀಯ ಸೌಮ್ಯಭಾವಗಳಲ್ಲಿ ನಲಿಯುವನು

ಮೆರೆದಿರಲಿ ಮರೆಯಿರಲಿ ವಿಪದ ಸಂಪದ ಬರಲಿ
ಪರಮಸಿರಿಗಾಡುವನು ಜೀವನದ ಜೂಜಿನಲಿ

ಭಯಕೆ ಬೆದರುವನಲ್ಲ ಸುಖಕೆ ಸಿಲುಕುವನಲ್ಲ
ಜಯಕೆ ಮರುಳಾಗಿ ಪ್ರಯತ್ನ ಬಿಡುವವನಲ್ಲ

ಇಳೆಯತುಂಬಲಿ ಕೀರ್ತಿ ಹೋದರೆಯು ಚಿಂತಿಸನು
ಉಳಿದು ಮೆರೆಯಲಿ ಕಾರ್ಯವಳಿದರೆಯು ಲೆಕ್ಕಿಸನು

ಆಶ್ವಾಸ ಲಕ್ಷ್ಯದಲಿ ವಿಶ್ವಾಸ ಕಾರ್ಯದಲಿ
ಈಶ್ವರ ಕಟಾಕ್ಷವನೆ ಬಯಸುವನು ಧನ್ಯಕಲಿ

ಮೂಲ ಶೀರ್ಷಿಕೆ : Character of the Happy warrior

## (೧೩) ಜೀವನ ಗೀತ

(ಲಾಂಗ್‌ಫೆಲೊ ವಿರಚಿತ)

ಬದುಕು ಬರಿ ಕನಸೆಂದು ಮರುಗುವುದು ಸರಿಯಲ್ಲ
ಅದಕೆ ನಿದ್ರೆಯೆ ಮೃತ್ಯು ತೋರುವಂತಿರವಿಲ್ಲ
ಬದುಕು ನಿಜ ಠಕ್ಕಲ್ಲ ಮಸಣಮುಗಿಸುವುದಲ್ಲ
ಅದು ಚೇತ ಮಣ್ಣ ಸೇರುವುದೆಂಬುದಲ್ಲ ||೧||

ನಮಗೆ ನೇಮಿಸಿದ ವಿಧಿ ಸೌಖ್ಯ ದುಃಖಗಳಲ್ಲ
ಕ್ರಮಿಸಿ ದಿನದಿನದಲ್ಲಿ ದುಡಿಯುವುದೆ ಬೇರಲ್ಲ
ಸಮಯಕ್ಕೆ ತಡೆಯಿಲ್ಲ ಸಾಧನಕೆ ಕಡೆಯಿಲ್ಲ
ಶ್ರಮಗೊಳುವ ಧೀರರಿಗೆ ಬೆಲೆ ತಪ್ಪಲಿಲ್ಲ ||೨||

ಜಗದ ರಣರಂಗದಲಿ ಜೀವಿತದ ಪಾಳ್ಯದಲಿ
ಯುಗಬದ್ಧ ಪಶುವಲ್ಲ ಕಲಿಯಾಗಿ ಹೋರಾಡು
ಮುಗಿದ ಕಾಲವೆ ತೀರಿ ಹೋದುದನು ಮಾನಿಸಲಿ
ಬಗೆದದರ ಚಿಂತನವು ನಿನಗೇಕೆ ನೋಡು ||೩||

ಈಗ ನಡೆಯುವ ಕಾಲ ಶುಭ ಸಫಲವಾಗಿರಲು
ಸೋಗಿನ ಭವಿಷ್ಯದಲಿ ನಂಬಿಕೆಯನೀಡಾಡು
ಬೀಗಿ ಒಳಗೆದೆ ಬಡಿದು ಮೇಲೆ ಈಶ್ವರನಿರಲು
ಈಗ ಸಲ್ಲುವುದೆಲ್ಲ ಈಗಲೇ ಮಾಡು ||೪||

ಮಹನೀಯ ಚರಿತಗಳು ಪಾಲಿಸುವುವೀ ನೆನಪು
ಇಹದಲಿರಲುತ್ತುಂಗ ಚರಿತ ನಮಗಳವಹುದು
ಇಹ ಬಿಡಲು ಭವಸಿಂಧು ಪುಳಿನದಲಿ ಕಾಲ್ಗುರಿಪು
ಬಹಭಗ್ನಯಾನರಿಗೆ ಹುರಿಗೊಡಲುಬಹುದು||೫||

ಇದನರಿತು ನಾವೆದ್ದು ಕಾರ್ಯಕ್ಕೆ ಮೆಯ್ಗೊಡುತ
ಎದೆಗೆಡದೆ ದೈವಕ್ಕೆ ಸಡಗರವ ಪಡೆದಿರುವ
ಇದರಲ್ಲಿ ಗೆಲ್ಲುತಲೆ ಬಿಡದದಕೆ ಹೆಗಲಿಡುತ
ಬದುಕಿರಲು ದುಡಿಯುತ್ತ ತಾಳುತ್ತಲಿರುವ ||೬||

ಮೂಲ ಶೀರ್ಷಿಕೆ -- A Psalm of Life

## (೧೪) ವಿತ್ತಹೀನ ವರದ
### (ಜಾನ್ whittier ಎಂಬ ಕವಿಯಿಂದ)

(ಚುನಾವಣೆಯ ಸಮಯ ಬಂದಾಗ ಶ್ರೀಸಾಮಾನ್ಯನ ಭಾವನೆ ಏನಿರುವುದೆಂಬುದನ್ನು ಈ ಕವನದಲ್ಲಿ ಕಾಣಬಹುದು.ವರ; ಎಂದರೆ ವೋಟು. ವರದ ; ಮತದಾರ --ಸಂ)

ಗರುವಿಕೆಯ ವೆಗ್ಗಳಿಗ ಸರಿಯಹನು ನನಗೀಗ
ಇರನು ಮೇಲೆಂಬನು ಚುನಾವಣೆಯಲಿ
ವರುಷದೊಳಗೆಲ್ಲ ಬೇಸರದಿಂದ ದುಡಿದರೆಯು
ಅರಸನಾಗೊಪ್ಪುತಿಹೆನೀ ದಿನದಲಿ ||೧||

ಹಿರಿಯರಾರೀವಾಗ ಕಿರಿಯರವರಿಗೆ ಜೋಡು
ದೊರೆತ ವಿಖ್ಯಾತಿ ಅಖ್ಯಾತವಹುದು
ಪುರಜನರ ಭವನವೆನಗರಮನೆಯ ತೆರನಾಗಿ
ವರಣಪತ್ರದ ಪೆಟ್ಟಿ ಪಟ್ಟವಹುದು ||೨||

ಇಂದು ವೃತಿಯಲಿ ರಾಷ್ಟ್ರಸೇವೆಯನು ಮಾಡುವನು
ಪುಂದಿಯರ ಧನಿಗಳಿಗೆ ಸಂಗಡಿಗನು
ಕಂದಿ ಸುರ್ಕಿದ ಕೈಯ ಕೆಂಚನೀ ಸಮಯದಲಿ
ಚಂದ ತುಡಿಕೆಯ ಚಲುವರೊಂದಿಗಿಹನು

ಹೊನ್ನು ಹೊಲಕಲ್ವಿಗಳ ಜಂಭ ಮಾಡುವರೊಡನೆ
ನನ್ನ ಸತ್ತೆಯನೀಗ ಕಾಣಿಸುವೆನು
ಚಿನ್ನ ಬಿನ್ನಾಣಗಳು ನನಗಿಲ್ಲ ಸಾಧುಮತಿ
ಇನ್ನು ಪ್ರಬಲವೆಂದು ತೋರಿಸುವೆನು

ಪರಿಹರಿಸಲನ್ಯಾಯ ಕಷ್ಟಗಳು ನಿಂತಿರಲು
ಹರಸಿ ಸದ್ಧರ್ಮವನು ಪಾಲಿಸುವೆನು
ಹರಕು ಬಟ್ಟೆಯನುಟ್ಟು ತೇಪೆಯಂಗಿಯ ತೊಟ್ಟು
ನರನೀಗ ನರನೆಂದು ಸಾಧಿಸುವೆನು ||೫||

ಮೂಲ ಶೀರ್ಷಿಕೆ -- The poor Voter on Election Day

## (೧೫) ಕವಿರಾಜ
(ಎಮರ್ಸನ್ ಕವಿಯಿಂದ)

ವಿಧಿ ಸೃಜಿಸಿದ ಮೂವರು ವರ ಪುತ್ರರು
ಅಧಿಕರಿಸುವ ವಿಖ್ಯಾತ ಚರಿತ್ರರು
ಹಿರಿಯವ ತಾತ್ತ್ವಿಕ ವೀರನೆ ನಡುವಿಗ
ಕಿರಿಯವ ನುಡಿವೆಣ್ಣಿನ ನೆಚ್ಚಿನ ಮಗ
ಇವನೇ ಕವಿ ಶಾಸಕ ಸುವಚನಗಳ
ಅವರಿಗರಸುತನ ಸತ್ಯ ಸುಕೃತಗಳ
ಹೃದಯದೊಳಗೆ ಸೆರೆಯಿರುವ ಬಗೆಗಳನು
ಮೊದಲಲಿ ಕವಿಯವತರಿಸಿ ಬಿಡಿಸಿದನು
ಸೂರಿಗೆ ಲಲಿತ ವಚನಗಳ ಕಲಿಸುತ
ಶೂರನ ಹೃದಯಕೆ ಸಿರಿಸವ ಬರಿಸುತ
ಕೂರ್ತನ ರಸನೆಗೆ ಮಧುವನು ಸೂಸುತ
ಆರ್ತ ಹೃದಯಕಂಜನವನು ಪೂಸುತ
ಇಲ್ಲದುದನು ಸೃಜಿಸುವವ ಧಾರಕ
ಎಲ್ಲರನೊಲಿಸುವ ಶೋಭಾಕಾರಕ
ಜಲಕೇಳಿಗೆ ಸಾಗರವವನಿಗೆ ಕೆರೆ

ಫಲಪುಷ್ಪಗಳಿಗೆ ತೋಟ ವಸುಂಧರೆ
ರಥದಲಿ ಚರಿಸುವನಂಬರ ಲೊ
ಕಥನಕರಿದು ಕವಿರಾಜನ ವೈಭವ
ಧೂಮಜಗಳು ತೇಲಾಡುವ ಕಡೆಯಲಿ
ತಾಮರೆಯಿರುವಲ್ಲುದದ ಹರಿವಿನಲಿ
ವಿಹಗಗಳುಲಿಯುತ ಹಾರುವ ದಿಶೆಯಲಿ
ಅಹರಾಗಮದಲಿ ರಜನಿಯ ಮುಖದಲಿ
ನೀಲಗಗನದಲಿ ತಾರಾಗಣದಲಿ
ಓಲಾಡುವನು ಸುರಸದ ಲಹರಿಯಲಿ
ಮದಭಯ ಕೋಪ ಪ್ರಣಯಗಳೆಲ್ಲವ
ಹೃದಯದ ರಂಗದಲಾಡಿಸಬಲ್ಲವ
ಮೂರ್ತಪದಾರ್ಥದ ಸೌಂದರ್ಯದೊಳಗೆ
ಪೂರ್ತಿಯ ಕಾಣದು ಕವಿರಾಜನ ಬಗೆ
ಕವಿ ಕಾಣುವುದನು ಹೆರವರು ಕಾಣರು
ಅವನಾಭಾಸಕೆ ಕಪ್ಪವ ತೆರುವರು
ನಿರ್ಮಲತೆಯ ನಿಜಸೂರಿ ಬಿಡುವನೇ
ಮರ್ಮ ತಿಳಿದ ಕವಿ ಹೊಲಸಾಡುವನೇ
ಶೋಧಿತ ಭಾವದ ರಸಿಕನೆ ವರಕವಿ
ಬೋಧಾಲಂಕೃತ ಕಾವ್ಯರಸವೆ ಸವಿ
ರವಿ ರುಚಿ ಪೋಷಿತ ಕಮಲದ ಶುಚಿತೆಯ
ಸವಿಮಾತಿನ ಕವಿರಾಜಗೆ ಜಯ ಜಯ

ಮೂಲ ಶೀರ್ಷಿಕೆ ?

## (೧೬) ಮಂಗಲ ಪದ್ಯ
### (ಹ.ನಾ. ಅವರ ಸ್ವರಚಿತ ಗೀತೆ)

ಧನ್ಯವಾಗಲಿ ಹಿರಿಯ ಸಿರಿವಡೆದ ಕರುನಾಡು
ಧಾನ್ಯ ಧನ ವಿಜ್ಞಾನ ಕೋಶವೆನಿಸಿ
ಕನ್ನೆಯರೆ ಯುವರೆ ಮಾಹಾತ್ಮ್ಯವನು ಬಯಸುತ
ಮಾನ್ಯರಾಗುವ ಜನರ ದೇಶವೆನಿಸಿ ||೧||

ತಳಕಾಡಿನಿಂದ ಕಲ್ಯಾಣ ನಗರದ ವರೆಗೆ
ಹಳೆಯ ರಾಜ್ಯಗಳಿಲ್ಲಿ ಶೋಭಿಸಿದುವು
ಅಳಿದ ಬನವಾಸೆ ಮನ್ನೆಯ ಖೇಟ ಹಳಬೀಡು
ಉಳಿದ ಮೈಸೂರಿದನು ಭೂಷಿಸಿದುವು ||೨||

ಅಕ್ಕದೇವಿಯ ಪರಿಯಲಬಲೆಯರೆ ಪುರುಷರಿಗೆ
ತಕ್ಕ ಸಾಮರ್ಥ್ಯವನು ತೋರಿಸಿದರು
ರಕ್ಕಸರ ಕಲ್ಪನೆಯ ಚಿಪ್ಪಿಗರು ಕಲ್ಲಿನಲಿ
ಅಕ್ಕಸಾಲಿಗರಂತೆ ಚಿತ್ರಿಸಿದರು ||೩||

ಸುಕವಿ ಪಂಡಿತರ ವಿಜ್ಞಾನಕೆಲ್ಲರು ಮೆಚ್ಚಿ
ಶುಕಕೆ ನಾಡಿನ ಹೆಸರನೊಪ್ಪಿಸಿದರು
ಪ್ರಕಟರಾಗಕ್ಕದನು ಸಕಲ ಗಾಯಕರಿಗಿತ್ತು
ಸುಕಲಾವಿದರ ಯಶವ ಮಾನಿಸಿದರು ||೪||

ವರಧರ್ಮಶಾಸ್ತ್ರಗಳ ಟೀಕಿಸಿದ ಪಂಡಿತರು
ಹರಿಹರೋಪಾಸಕರು ಮೆರೆದ ನಾಡು
ಪರಮಾತ್ಮನಾಳುಗಳೆ ವರವರ್ಣದವರೆಂಬ
ಗುರುಭಾವವನು ಸಾರಿದವರ ಬೀಡು ||೫||

ಭರತವರ್ಷದ ಹತ್ತುಕೋಟಿ ಜನರಿಲ್ಲೊಂದೆ
ಪರಿಪಕ್ವ ಭಾಷೆಯನು ಭಜಿಸುತಿಹರು
ತರತರದ ನವಜಾತ ಬೋಧಾಶಯಗಳಿಂದ
ಭರಿತರಾಗೀನಾಡ ಹರಸುತಿಹರು ||೬||

## ೧. ಕನ್ನಡದ ಕಥಾನಕ

('A short story of Kanerese' ಎಂಬ ವಿವರಣಾತ್ಮಕ ಇಂಗ್ಲಿಶ್ ಶೀರ್ಷಿಕೆಯನ್ನೊಳಗೊಂಡ ೩೦ ಪುಟಗಳ ಈ ಪುಸ್ತಿಕೆಯನ್ನು ಹ.ನಾ. ೧೯೧೯ರಲ್ಲಿ ಬರೆದು ಪ್ರಕಟಿಸಿದರು. ನಿರೂಪಣೆ ಕನ್ನಡದಲ್ಲೇ ಇದೆ. ಆದರೂ ಶಬ್ದಮಣಿದರ್ಪಣದ ಪ್ರಕಟನೆಯ ಕಾಲಕ್ಕೆ ಕಿಟಲರ್ ಇಂಗ್ಲಿಶ್‌ನಲ್ಲಿ ಪ್ರತಿ ಸೂತ್ರದ ಸಾರವನ್ನು ಕೊಟ್ಟಿರುವ ರೀತಿಯಲ್ಲಿ ತಾನೂ ಹಾಗೆ ಮಾಡಿರುವುದಾಗಿ ಹ.ನಾ. ಈ ಪುಸ್ತಿಕೆಯ ಪ್ರಾರಂಭದಲ್ಲಿ ಹೇಳಿದ್ದಾರೆ. ಆ ಇಂಗ್ಲಿಶ್ ಸಾರ ಬದಲಾಗಿ ಇಲ್ಲಿ ಉಪ ಶೀರ್ಷಿಕೆಗಳನ್ನು ಕೊಟ್ಟಿದೆ.

ತಮ್ಮ ಪ್ರಾಸ್ತಾವಿಕದಲ್ಲಿ 'I intend in this book to avoid as far as possible a repetition of the contents of well known works on the grammar of ancient and modern Kanerese and to traverse new ground' ಎಂದು ಹೇಳಿದ್ದಾರೆ. ಮೂರು ಪರಿಚ್ಛೇದಗಳಲ್ಲಿ ತಮ್ಮ ವಿಷಯವನ್ನು ಮಂಡಿಸಿದ್ದಾರೆ. -ಸಂ.)

# ಪರಿಚ್ಛೇದ ೧

## 'ಕರ್ನಾಟ' ಶಬ್ದದ ಮೂಲ

ಸಂಸ್ಕೃತದಲ್ಲಿ ಕರ್ಣಾಟಕ ಶಬ್ದದ ಎರಡನೆಯ ಅವಯವವಾಗಿ ಕಾಣುವ ನಾಟ ಶಬ್ದವೂ ಕನ್ನಡನಾಡಿನ ಹೆಸರಾಗಿರುವುದರಿಂದ ಕರ್ಣ - ಅಟ ಎಂಬಂತೆ ಪದಚ್ಛೇದ ಮಾಡುವುದು ಸರಿಯಲ್ಲ. ಆಂಧ್ರ ಚೋಳ ಪಾಂಡ್ಯಕೇರಳ ತುಳುವ ಹೈಗ ದೇಶಗಳು ತಗ್ಗು ನೆಲದಲ್ಲಿದ್ದು ಕರ್ಣಾಟವು ಘಟ್ಟದ ಮೇಲಿರುವುದರಿಂದ ಇದಕ್ಕೆ ಕೊಟ್ಟ ಕರುನಾಡು ಅಂದರೆ ಉನ್ನತ ಪ್ರದೇಶವೆಂಬ ಹೆಸರು ಕರ್ಣಾಟ ಮತ್ತು ಕನ್ನಡ ಎಂಬ ರೂಪಗಳನ್ನು ಧರಿಸಿರಬೇಕು.* ಈ ಮಾತಿಗೆ ಕರಿನೆಲದ ನಾಡು, ಮತ್ತು ಮನುಸ್ಮೃತ ಕರಣ ನಟರ ನಾಡೆಂದೂ ವ್ಯಾಖ್ಯಾನವನ್ನು ಹೇಳಿದ್ದಾರೆ.

'ಸಂಸ್ಕೃತಂಪ್ರಾಕೃತಮಪಭ್ರಂಶಂ ಪೈಶಾಚಿಕಮೆಂಬ ಮೂರುವರೆ ಭಾಷೆಗಳೊಳ್ ಪುಟ್ಟುವ ದ್ರವಿಡಾಂಧ್ರ ಕರ್ಣಾಟಕಾದಿ ಷಟ್ಪಂಚಾಶತ್ ಸರ್ವವಿಷಯಭಾಷಾ ಜಾತಿಗಳಕ್ಕುಂ' ಎಂದು ನಾಗವರ್ಮನು ಛಂದೋಂಬುಧಿಯಲ್ಲಿ ಬರೆದಿರುವನು. ಈ ನಾನಾ ದೇಶಭಾಷೆಗಳಿಗೆ ದೇಶೀಯವೆನ್ನುತಿದ್ದರು. ಮಹಾರಾಷ್ಟ್ರೀಯ ಜ್ಞಾನೇಶ್ವರೀ ಕಾವ್ಯದಲ್ಲಿ ದೇಶೀಯ ಎಂದರೆ ಮರಾಠಿ. ಕೇಶಿರಾಜನ ದೇಶೀಯವೆಂಬುದು ಕನ್ನಡ. ಪ್ರಾಕೃತದಲ್ಲಿ ದೊರಕುವ ದೇಶೀಯ ನಾಮಗಳನ್ನು ಸಂಗ್ರಹಿಸಿ ಹೇಮಚಂದ್ರನು ಬರೆದ ನಿಘಂಟಿನಲ್ಲಿ ದೇಶೀಯವೆಂದರೆ, ಸಂಸ್ಕೃತ ಕಾವ್ಯಗಳಲ್ಲಿ ಪ್ರಸಿದ್ಧವಾಗಿರದೆ ಕೆಲವು ದೇಶಗಳಲ್ಲಿ ಮಾತ್ರ ಸಲ್ಲುವ ವಾಚಕಗಳೆಂಬ ಅಭಿಪ್ರಾಯವು ಅಲ್ಲಲ್ಲಿ ಕಾಣುತ್ತದೆ. ಅಪ್ಪ ,ಅಮ್ಮ, ಅವ್ವ, ಈ ಮಾತುಗಳು ಅಂಬ, ಅಂಬಾ, ಶಬ್ದಗಳಿಂದಲೂ ಬಾಪ,ಬಪ್ಪ, ಇವು ವಪ್ರ ಅಥವಾ ಬೃಹತ್ ಪಿತಾ ಎಂಬುದರಿಂದಲೂ ಹುಟ್ಟಿದುವು. ಆದರೆ ಈ ವಾಚಕಗಳು ಎಲ್ಲಾ ದೇಶಗಳಲ್ಲಿಯೂ ಪ್ರಚಲಿತವಾಗುವಷ್ಟು ಪ್ರಸಿದ್ಧವಲ್ಲದ ಕಾರಣ ಅವಕ್ಕೆ ದೇಶೀಯವೆಂದರು. ಅಕ್ಕಾ, ಅತ್ತಾ ಎಂದರೆ ಸಂಸ್ಕೃತದಲ್ಲಿ ತಾಯಿ; ಬೇರೆ

---

*ಈ ಕುರಿತ ಹೆಚ್ಚಿನ ಅವರ ವಿವರಣೆ 'ಕನ್ನಡದ ಕಥಾನಕ' ದ ಕೊನೆಯಲ್ಲಿ (ಪರಿಶಿಷ್ಟ) ಬಂದಿದೆ.

ಅರ್ಥದಲ್ಲಿ ಇವು ದೇಶೀಯನಾಮಗಳು. ಅನಸ್ ಎಂದರೆ ಸಂಸ್ಕೃತದಲ್ಲಿ ತಂದೆಯಾಗಬಹುದು. ತಾಯಿಯಾಗಬಹುದು. ಮಾಗಧಿಯಲ್ಲಿ ಅನ್ನಾ ಎಂದರೆ ತಾಯಿ; ಕೊಂಕಣಿಯಲ್ಲಿ ತಂದೆ, ತಮಿಳಿನಲ್ಲಿ ಅನ್ನೈ ಎಂದರೆ ತಾಯಿ. ಅಣ್ಣ ಶಬ್ದವು ಇದರಿಂದಲೇ ಹುಟ್ಟಿರಬಹುದು; ಅಥವಾ ಹೇಮಚಂದ್ರನು ಇದನ್ನು ಣಣ್ಣ ಎಂಬಂತೆ ಬರೆದಿರುವುದರಿಂದ ಇದು ನಾಯ, ನಾಯನ್ ಶಬ್ದವಾಗಿರಬಹುದು. ಹೀಗಿದ್ದು ಇವು ದೇಶೀಯವಾಚಕಗಳು. ತುಪ್ಪ ಶಬ್ದವು ತನೂನಪ, ತಊಂಅಪ, ತೂಂಪ ಹೀಗೆ ಹುಟ್ಟಿದ ತದ್ಭವವಾಗಿರಬಹುದು. ಆದರೆ ದೇಶಭೇದದಿಂದ ಆದಕ್ಕೆ ಆರು ಅರ್ಥಗಳು ಪ್ರಾಪ್ತಿಸಿರುವುದರಿಂದ ಅದು ದೇಶೀಯವಾಯಿತು. ಹೇಮಚಂದ್ರನ ದೇಶೀರತ್ನಾವಳಿಯಲ್ಲಿ ಸುಮಾರು ೧೫೦ ಕರ್ಣಾಟಕ ನಾಮಗಳನ್ನು ಕಾಣಬಹುದು. ಉದ್ದು, ಊರು, ಕರಡಿ, ಪಾವು, ವುಲಿ, ನೇಸರು, ಮರುಳು, ಮುರಿ, ಮೂಹಿಲು - ಮುಯ್ಯು ಮುಂತಾದ ಪದಗಳು ಹುಟ್ಟುಗನ್ನಡವಾಗಿರಬಹುದು. ಕೆಲವು ಅಪ್ರಸಿದ್ಧ ತತ್ಸಮಗಳು; ಇನ್ನು ಹಲವು ತದ್ಭವಗಳೇ. ಉಳಿದವುಗಳ ಮೂಲವು ಸಂದಿಗ್ಧವಾಗಿದೆ. ಆಂಡಯ್ಯನು ಸಕ್ಕದಂಬೆರಸಿಲ್ಲದೆ ಕನ್ನಡಂ ಬಿಗಿವೊಂದಿರುವಂತೆ ಬರೆದ ಕಬ್ಬಿಗರ ಕಾವ್ಯದಲ್ಲಿ ತದ್ಭವಗಳನ್ನು ಯಥೇಷ್ಟವಾಗಿ ಸೇರಿಸಿರುವನು. ಅಪಭ್ರಂಶಕ್ಕೆ ಕೇಶಿರಾಜನು ಅಚ್ಚಗನ್ನಡಂ ಬೇಳ್ಪರ ಕೆಯ್ಯೊಕ್ಕ ನಿಧಿ ಎಂದನು. ಆದ ಕಾರಣ ಸಂಸ್ಕೃತಭವವಲ್ಲದ ಮಾತಿಗೆ ನಾವು ಹುಟ್ಟುಗನ್ನಡವೆನ್ನಬಹುದು. ತಮಿಳು,ತೆಲುಗು ಕರ್ಣಾಟ ಮುಂತಾದ ದಾಕ್ಷಿಣಾತ್ಯ ಭಾಷೆಗಳಲ್ಲಿ ಸಂಸ್ಕೃತದಿಂದ ಹುಟ್ಟಿದಂತೆ ಕಾಣದ ಅನೇಕ ವಾಚಕಗಳಿರುವುದರಿಂದಲೂ ಅವುಗಳ ವ್ಯಾಕರಣವು ಪ್ರಾಕೃತ ಭಾಷೆಗಳ ವ್ಯಾಕರಣದಂತಿಲ್ಲದರಿಂದಲೂ ಅವುಗಳನ್ನು ಈಗಿನ ಪಂಡಿತರು ದ್ರಾವಿಡವೆಂಬ ಬೇರೆ ಜಾತಿಯಲ್ಲಿ ಸೇರಿಸಿರುವರು.

### ಸಿದ್ಧ ಧಾತುಗಳು

ಹುಟ್ಟುಗನ್ನಡದಲ್ಲಿ ಸುಮಾರು ೭೫೦ ಸಿದ್ಧ ಧಾತುಗಳೇ ಇರುವುವು. ಕೇಶಿರಾಜನ ಧಾತುಪಾಠದಲ್ಲಿ ಹಲವು ನಿರಪೇಕ್ಷೆಯಿಂದ ಬಿಟ್ಟುಹೋಗಿವೆ. ಕ.ಸಾ.ಪ. ಪತ್ರಿಕೆಯಲ್ಲಿ ಪ್ರಕಟಿಸಿದ ಚಾಮುಂಡರಾಯಪುರಾಣದಲ್ಲಿ "ಕಳಿಂಗನಾಗಂಕಯ್ಯಂಕೊಂಡೊಡೆ" ಎಂದಿದೆ. ಗುಲ್ಬರ್ಗದ ಒಂದು

ಶಾಸನದಲ್ಲಿ "ಅಹಿಕೊಂಟೊಡೆ" ಎಂದಿದೆ. ಕಾದಂಬರಿಯಲ್ಲಿ "ಅಮಾನ್ಯರು ನಿನ್ನಂಬಟೂರಿಸದಂತೆ" ಎಂದಿದೆ. ದುರ್ಗಸಿಂಹನ ಪಂಚತಂತ್ರದಲ್ಲಿ "ಕಿವಿತೀಂಬೊಡೆ" ಎಂದಿದೆ. ಇಲ್ಲಿ ಕಾಣುವ ಧಾತುಗಳು ಹಳೆಯ ನಿಘಂಟುಗಳನ್ನು ಸಮೀಕ್ಷಿಸಿ ಬರೆದ ಕಿಟ್ಟೆಲವರ ನಿಘಂಟಿನಲ್ಲಿ ಕೂಡ ಇಲ್ಲ. ಧಾತುಗಳಿಂದ ಉದ್ಭವಿಸಿದಂತಿಲ್ಲದ ಎಷ್ಟೋ ಹುಟ್ಟುಗನ್ನಡ ನುಡಿಗಳು ಈಗಲೂ ಪ್ರಯೋಗದಲ್ಲಿವೆ. ಪೂರ್ವದಲ್ಲಿ ಕವಿಗಳು ಬರ್ದಿಲ, ಬಿಡುಗಂಣ ಪಿರಿತಿನಿ ಎಂಬಂತೆ ಪದಗಳನ್ನು ರಚಿಸುತಿದ್ದರು. ಆದರೆ ರೂಢಿಯಲ್ಲಿರುವ ಸಂಸ್ಕೃತ ಪದಗಳು ಅಣಿಯಾಗಿ ದೊರೆಯುವಾಗ ಹೊಸ ನುಡಿಗಳನ್ನು ನಿರ್ಮಿಸುವುದು ಬರಿದಂದುಗವೆಂದು ಆ ಸಾಹಸವನ್ನು ನೀಗಿ, ಈಗ ಅಚ್ಚ ಗನ್ನಡದ ಬೆಳವಣಿಗೆಯೇ ನಿಂತುಹೋಗಿದೆ. ಆದರೂ ಲೋಕೋಕ್ತಿ ನಿಧಾನದಲ್ಲಿ* ಹಾಕಿರುವ ಮೊದಲಿನ ೫೦ ಗಾದೆಗಳನ್ನು ಪರೀಕ್ಷಿಸಿದರೆ ಅವುಗಳಲ್ಲಿ ಸುಮಾರು ೬೦ ತತ್ಸಮ ತದ್ಭವಗಳಿರುವಾಗ, ೧೨೦ ಹುಟ್ಟುಗನ್ನಡ ನುಡಿಗಳು ಕಾಣುತ್ತವೆ.

### ಸಂಸ್ಕೃತದ ಹೆಚ್ಚಳ

ಶಾಸ್ತ್ರಗಳ ವಾಙ್ಮಯದಲ್ಲಿ ಹೆಚ್ಚಾಗಿ ಸಂಸ್ಕೃತವೇ ವ್ಯಾಪಿಸಿದೆ. ನಾಗವರ್ಮ,ಭಟ್ಟಾಕಲಂಕರು ಕನ್ನಡದ ವ್ಯಾಕರಣಕ್ಕೆ ಸಂಸ್ಕೃತ ಸೂತ್ರಗಳನ್ನು ಕಲ್ಪಿಸಿದರು. ಅಲಂಕಾರ ಗ್ರಂಥಗಳಲ್ಲಿ ಸಂಸ್ಕೃತ ಪ್ರಮಾಣಗಳನ್ನು ಕನ್ನಡಿಸಿ ಹಾಕಿದರು. ಕೆಲವು ಉದ್ದಾಮ ಕವಿಗಳು "ಕಾಳಿದಾಸನುಮನೇಳಿಸ"ಲಿಕ್ಕೆ ಪ್ರಯತ್ನಪಟ್ಟರು. ಆದರೂ ಗೀರ್ವಾಣಭಾಷೆಯ ಸಮುದ್ರದಲ್ಲಿ ಕನ್ನಡ ನಡುಗಡ್ಡೆಗಳು ಅಲ್ಲಲ್ಲಿ ನಿಂತಿವೆ. ಬೆದಂಡೆ, ಚತ್ತಾಣ, ಇಡುಕುಂಗಬ್ಬ, ಕುಳಕ, ಕೋಶ, ಮೇಲ್ವಾಡು ಎಂಬಂತಹ ಮಾತುಗಳೇ ಕವಿಗಳ ಸ್ವಾತಂತ್ರ್ಯವನ್ನು ತೋರಿಸುತ್ತವೆ. ಸಂಸ್ಕೃತದಲ್ಲಿಲ್ಲದ ಪ್ರಾಸವನ್ನು ಕನ್ನಡಿಗರು ಈವರೆಗೆ ಪಾಲಿಸಿದ್ದಾರೆ. ಆಂಗ್ಲಭಾಷೆಯಲ್ಲಿಯೂ ಬೋಳುಪದ್ಯಗಳು ಸಲ್ಲುವುದರಿಂದ ಇನ್ನುಮುಂದೆ ಆದರ ಗತಿಯೇನಾಗುತ್ತದೊ ತಿಳಿಯದು. ಕನ್ನಡದೊಡನೆ ಕೊಳಿಸಕ್ಕದವನ್ನು ಕಲಸುವ ರೀತಿಯನ್ನು ಕೆಲವರು ನಿಂದಿಸಿದರು. ಲಲಿತ ವಹ ಕನ್ನಡದ ಪಕ್ಷಪಾತವು ಈಚೆಗೆ ಪ್ರಬಲಿಸುತ್ತ ಬರುತ್ತಿತ್ತಾದರೂ ಪಾಶ್ಚಾತ್ಯ

---

*ಬಾಸೆಲ್ ಮಿಶನ್ನಿನವರು ಪ್ರಕಟಿಸಿದ, ಗಾದೆಗಳ ಪ್ರಥಮ ಸಂಗ್ರಹ

ಶಾಸ್ತ್ರಗಳ ಆಗಮನದಿಂದ ಸಂಸ್ಕೃತಪದಗಳ ಆವಶ್ಯಕತೆ ಇನ್ನು ಮುಂದೆ ಹೆಚ್ಚಬೇಕಲ್ಲದೆ ಕಡಿಮೆಯಾಗದು.

**ಕನ್ನಡ ತದ್ಭವಗಳು ಮತ್ತು ಪ್ರಾಕೃತ**

ಕನ್ನಡದಲ್ಲಿರುವ ತದ್ಭವಗಳನ್ನೆಲ್ಲ ಕನ್ನಗಡಿಗರೇ ನಿರ್ಮಿಸಿಕೊಳ್ಳಲಿಲ್ಲ. ಅಚ್ಚುಕಟ್ಟು=ಅತ್ಯುತ್ಕೃಷ್ಟ, ಅದ್ದ= ಒದ್ದೆ, ಆರ್ದ್ರ, ಅಂಬಿಲ =ಆಮ್ಲ, ಅಯ್ಯ ಉದ್ದ, ಒಡ್ಡು=ಅವಧಾ, ಕುಟ್ಟು=ಕ್ಷುದ್, ಕೊಟ್ಟ=ಕೋಷ್ಠ, ಗಾವುದ=ಗವ್ಯೂತ, ಗೋನ=ಗೋಂದೆ-ಗೋನಾಥ, ದಡ್ಡ=ದಸ್ರ, ಪಕ್ಕಾ=ಪಕ್ವ, ಪಲ್ಲಂಕ=ಪರ್ಯಂಕ, ಪಸುಬೆ=ಪ್ರಸೇವಕ, ಪೂಂಚ್=ಪೂಸು, ಪ್ರೋಂಚ್, ಪೆಗ್ಗು=ಫಲ್ಗು, ಬೊಂದಿ=ಬುಧ್ನ, ಸಕ್ಕದ, ಸಂಣ, ಸದ್ದು, ಸಕ್ಕರೆ, ಸಕ್ಕಲಿ, ಸುಂಕ= ಶುಲ್ಕ ಇಂತಹ ಮಾತುಗಳು ಪಾಲಿ ನಿಘಂಟಿನಲ್ಲಿಕಾಣುತ್ತವೆ ಪ್ರಾಕೃತ ವ್ಯಾಕರಣಗಳಲ್ಲಿ ಹಲವು ದೊರೆಯುತ್ತವೆ. ಚಾಮುಂಡರಾಯ ಪುರಾಣದಲ್ಲಿ ಕೆಲವು ಗಾಹೆಗಳನ್ನು ಉದ್ಧರಿಸಿ ಹಾಕಿರುವುದರಿಂದ ಜೈನರ ಗುರುಗಳು ಪ್ರಾಕೃತ ಗ್ರಂಥಗಳನ್ನು ಶಿಷ್ಯವರ್ಗದವರಿಗೆ ವಿವರಿಸಿ ಹೇಳುತಿದ್ದರೆಂದು ಊಹಿಸಬಹುದು. ಪ್ರಾಕೃತ ಗ್ರಂಥ ಪಠನವು ಪೂರ್ವದಲ್ಲಿ ಪ್ರಚಲಿತವಿತ್ತೆಂದು ಶಾಸನಗಳಿಂದಲೂ ಅನುಮಾನಿಸಬಹುದು. ಸೀಸ=ಶೀರ್ಷ, ಕಂದ, ಚತುಷ್ಪದಿ, ಷಟ್ಪದಿ ಈ ವೃತ್ತಗಳ ಲಕ್ಷಣಗಳು ಪ್ರಾಕೃತದಲ್ಲಿದ್ದಂತೆಯೆ ಕನ್ನಡದಲ್ಲಿ ಇಲ್ಲದಿದ್ದರೂ ಆ ಹೆಸರುಗಳು ಉಳಿದಿವೆ. ಪ್ರಾಕೃತದಲ್ಲಿ ಆದಿಪ್ರಾಸವಿಲ್ಲದಿದ್ದರೂ ಅಂತ್ಯಪ್ರಾಸವು ಪ್ರಸಿದ್ಧವಾಗಿತ್ತು. ರಗಳೆಗಳಲ್ಲಿ ಆದಿಪ್ರಾಸಕ್ಕೆ ಬದಲಾಗಿ ಅಂತ್ಯಪ್ರಾಸವನ್ನಿಡುವುದಕ್ಕೆ ಇದೊಂದು ಕಾರಣವಾಗಿದ್ದರೂ ಇರಬಹುದು. ಕಿರಿಯಡಿಗಳಲ್ಲಿ ೩, ೪ ೩,೪, ಮಾತ್ರೆಗಳು ಬರುವ ಷಟ್ಪದಿಯೊಂದಿದ್ದರೂ ೪,೫, ೪,೫, ಮಾತ್ರಗಳನ್ನು ಹಾಕಿದ್ದಿಲ್ಲ. ಕನ್ನಡದಲ್ಲಿ ೯ ಮಾತ್ರೆಯ ತಾಳವಿಲ್ಲದಿರುವುದೇ ಇದಕ್ಕೆ ಕಾರಣವಾಗಿರಬಹುದು. ಚಂದ್ರ ಕ್ರೀಡಾ ಎಂಬ ೯ ಮಾತ್ರೆ ತಾಳದಲ್ಲಿ ಪದ್ಯಗಳನ್ನು ಕಟ್ಟಿ ಹಿಂದುಸ್ತಾನಿ ಗಾಯಕರು ಹಾಡುತ್ತಾರೆ. ಇದು ಪುರಾಣಗಳನ್ನೋದಲಿಕ್ಕೆ ಬೇಕಾದಷ್ಟು ಸರಳವಾಗಿಲ್ಲ. ಕೇಶಿರಾಜನು ಅಪಭ್ರಂಶ 'ಪ್ರಕರಣದಲ್ಲಿ ಬರೆದ ಸೂತ್ರಗಳು ಪ್ರಾಕೃತ ವ್ಯಾಕರಣಗಳಿಂದ ತೆಗೆದು ಕನ್ನಡಕ್ಕೆ

ಸರಿಪಡಿಸಿಕೊಂಡವುಗಳೇ. ಅಪ, ಅವ, ಉಪ, ಈ ಉಪಸರ್ಗಗಳಿಗೆ ಓಕಾರವು ಆದೇಶವಾಗಿ ಬರುತ್ತದೆಂದೂ ಇನ್ನು ಕೆಲವು ಸೂತ್ರಗಳನ್ನೂ ಬರೆದಿದ್ದರೆ ಚೆನ್ನಾಗುತ್ತಿತ್ತು. ಅಪಸರ = ಓಸರ, ಅವಸ್ರು = ಓಸರು; ಉಪಾಧ್ಯಾಯ=ಉವಜ್ಝಾಅ =ಓಜ. ಓಸುಗ, ಓಸ್ಕರ - ಈ ಪ್ರತ್ಯಯಗಳು ಅವಶ್ಯಕ, ಅವಸರ ಎಂಬಂತಹ ಪದಗಳಿಂದ ಹುಟ್ಟಿರಲೂಬಹುದು.

**ಕನ್ನಡ ತದ್ಭವಗಳು ಮತ್ತು ಮರಾಠಿ**

ಕಿಟ್ಟೆಲರವರು ತಮ್ಮ ನಿಘಂಟಿನಲ್ಲಿ ಕನ್ನಡದ ಪ್ರತಿರೂಪವಿರುವ ಮರಾಠಿ ಪದಗಳನ್ನು ಅಲ್ಲಲ್ಲಿ ಕಾಣಿಸಿದ್ದಾರೆ. ಅವರು ಗುರುತು ಹಿಡಿಯದ ಕೆಲವು ಮಾತುಗಳನ್ನು ಉದಾಹರಿಸಿ ವ್ಯುತ್ಪತ್ತಿಯನ್ನು ಸೂಚಿಸಬಹುದು. ಓಲಗ - ಓಲಗ್ಗೋಸೇವಕ; ಅವಲಗ್ನ? ಕಾವರ- ಕಾಹುರ ಕಾತರ ಶಬ್ದಭವ. ಕೋಡ, ಕೋಡು = ಕೊಡ್ಡಂ ಆಶ್ಚರ್ಯಂ ಕೌತುಕ ? ಪೋಟ = ಪೊಟ್ಟಂ ಉದರಂ (ಪ್ರ) ಕೋಷ್ಠ. ರೋಟಿ -ರೊಟ್ಟಂ ತಂದುಲಪಿಷ್ಟಂ ರುಚ್ಯಪಿಷ್ಟ. ಇಂತಹ ನಾಮಗಳನ್ನು ಹೇಮಚಂದ್ರನು ಕೊಟ್ಟಿರುವನು. ಆಗರೂಂ, ಅಗ್ರ, ಅಗ್ನ್ಯರುಸ್, ಆಗಳಾ, ಅಗ್ಗಳ, ಅಭ್ಯರ್ಥಿತಾ ;ಆಡೀ, ಅಡ್ಡಿ, ಅಡ್ಡ ಅಭಿಯೋಗೇ; ಉಗಾಳ,ಉಗುಳು ಉದ್ಗಾರ, ಉಗ್ರಾಣೆ; ಉದ್ಗ್ರಹಣೆ, ಊದಬತ್ತಿ, ಉದ್ವರ್ತಿತ ;ಓಗರ - ಪಸ್ಕರ ; ಓಜೆ, ಋಜುತೆ; ಓಡಣ, ಒಡ್ಡಾಣ ಅಡ್ಡನಂ; ಓಡವ ಒದವು ಋದ್ಧಿ?; ಓಪಣೆ =ಒಪ್ಪಿಸು, ಅರ್ಪಣ ; ಕಟಕಟಾ, ಅಕಟಕಟಾ, ಕರ್ತಾಹೇಕರ್ತಾ?; ಗವಸಣ, ಗೋಪವಸನ?; ಚವಿ=ಸವಿ, ಚರ್ವ್ಯ, ಸೇವ್ಯ?; ನಿಕಾ, ನಿಕ್ಕುವ, ನಿಶ್ಚಯ; ಫೋಕರಣ=ಪೊಳ್ಕರಿಸು, ಸ್ಫುಟೀಕರಣ; ಬಿಸಾಟ=ವಿಸಟ, ವಿಸ್ಸೃತ; ಬೋಟ, ಬೆಟ್ಟು, ಬಾಹುಸ್ಥ; ಮೇಹುಡ ಮೇಘ. ಮೋಡ; ರೋಖ, ರಿಕ್ಥ; ವಾಡಣೆ, ಬಡಿಸು,ವರ್ಷಣಂ;ಸಪೂರ, ಸಪುಮೆಂದುಸಂಣಂ - ಶಬ್ದಸಾರ ಸ್ಥಪುಟ? ಉಳಿಗ, ಊಳಿಗ ;ಕೋಂಬ, ಕೊಂಬೆ; ಬಗಬಗೆ; ಬರಳ, ಬರಡು; ಬೋನ; ಮಾತು ;ಮಾಂದಿ, ಮಂದೆ; ಮಿರವ, ಮೆರೆ; ಮೇಚು ಮೆಚ್ಚು; ಶಿರಕಣೆ, ಸಿರ್ಕು;ಸವಳೆ, ಸವಳ್ತಡೆ;ಹಡಪ; ಹುಡೆ, ಹೊಡೆ -ಇಂತಹ ಮಾತುಗಳಿಗೆ ಸಂಸ್ಕೃತಮೂಲವನ್ನು ಸೂಚಿಸುವುದು ಕಷ್ಟಸಾಧ್ಯವೇ ಸರಿ. ವಾರ್ತಾ, ಬಾತ್, ಮಾತು ; ಮಿಥ್, ಮಿಥುನ, ಮಿದ್,

ಮಿಂದ್ (ಪ್ರೀತಿಸು), ಮದಿವೆ -ಹೀಗೆ ಯುಕ್ತಿಯಿಂದ ಸಂಸ್ಕೃತ ನಿಂಘಂಟುಗಳಲ್ಲಿ ಬೇಕಾದುದನ್ನು ಕಂಡುಹಿಡಿಯಬಹುದು. ಅಂತಹ ಸಾಹಸದಿಂದ ಫಲವಿಲ್ಲ. ಕನ್ನಡದಲ್ಲಿ ಈಚೆಗೆ ಪ್ರಚುರತೆಯನ್ನು ಹೊಂದಿದ ಸಾಂಗತ್ಯವೃತ್ತವು ಮರಾಠಿ ಸಾಕಿಯ ರೂಪಾಂತರವಾಗಿರಬಹುದು. ಸಾಕಿ ವೃತ್ತಾರ್ಧದಲ್ಲಿ ೪ ಮಾತ್ರೆಗಳ ೭ ಅವಯಗಳಿವೆ. ಸಾಂಗತ್ಯದಲ್ಲಿ ಈ ನಿಯಮವನ್ನು ಸೂಕ್ಷ್ಮವಾಗಿ ಅನುಸರಿಸದೆ ಒಂದು ಅವಯವದಲ್ಲಿ ೫ ಮಾತ್ರೆಗಳನ್ನು ಹಾಕಿದರೂ ಅವನ್ನು ನಾಲ್ಕಾಗಿಯೂ ಕೊನೆಯಲ್ಲಿ ೩ ಮಾತ್ರೆಗಳು ನಾಲ್ಕಾಗುವಂತೆಯೂ ಹಾಡುತ್ತಾರೆ.

## ಹೊರಗಿನ ಪ್ರಭಾವದ ಪರಿಣಾಮ

ಕೆಲವು ಕರ್ಣಾಟಕ ಕವಿರಾಜರ ಪೂರ್ವಜರು ತೆಲುಗು ತಮಿಳು ದೇಶಗಳಿಂದ ಬಂದರು. ಪಂಪನ ಹಿರಿಯನಾದ ಮಾಧವ ಸೋಮಯಾಜಿಯೂ ನಾಗವರ್ಮನ ಹಿರಿಯನಾದ ವೆಣ್ಣಮಯ್ಯನೂ ಆಂಧ್ರದೇಶದಲ್ಲಿರುವ ಎಲ್ಲೂರು ತಾಲೂಕದಿಂದ ಬಂದಿರಬೇಕು. ಶಾಸನಗಳಲ್ಲಿ ಕಾಣುವ ಏಳೂರು ಎಂಬ ಹೆಸರನ್ನು ನಾಗವರ್ಮನು ಸಪ್ತಗ್ರಾಮವೆಂದು ಸಂಸ್ಕೃತದಲ್ಲಿ ಬರೆದನು. ವೆಂಗಿಪಳುವೆಂಬ ತೆಲುಗು ನಾಮ ಕನ್ನಡದಲ್ಲಿ ವೆಂಗಿಪಳುವಾಯಿತು. ಪಂಪನು ನಿಗದಿಸಿದ ವಸಂತ, ಕೊಟ್ಟೂರು ನಿಡುಗುಂದಿ ವಿಕ್ರಮಪುರವೆಂಬ ಹೆಸರುಗಳು ಧಾರವಾಡ ಜಿಲ್ಲೆಯ ಈಶಾನ್ಯ ಭಾಗದಲ್ಲಿ ಕೆಲವು ಗ್ರಾಮಗಳಿಗಿದ್ದುವು. ಆದರೆ ಅವುಗಳನ್ನೊಳಗೊಂಡ ಬೆಳ್ವೊಲಮುನ್ನೂರನ್ನೂ ನಾಗವರ್ಮನ ಸಯ್ಯಡಿಯನ್ನೊಳಗೊಂಡ ಕಿಸುಕಾಡು ಎಪ್ಪತ್ತನ್ನೂ ರಾಷ್ಟ್ರಕೂಟರಿಂದ ಒಬ್ಬ ಗಂಗರಾಜನು ವರದಕ್ಷಿಣೆಯಾಗಿ ಪಡೆದುದರಿಂದಲೂ ತನ್ನ ಅರಸು ರಕ್ಕಸಗಂಗನೆಂದು ನಾಗವರ್ಮನು ಹೇಳಿರುವುದರಿಂದಲೂ ವೆಂಗಿ ರಾಷ್ಟ್ರವು ಇಲ್ಲಿತನಕ ವಿಸ್ತರಿಸಿತ್ತೆಂದು ನೆನಸಲಾಗುವುದಿಲ್ಲ. ವೆಂಗಿಪಳುವಿನಂತೆಯೇ ವಸಂತ ಕೊಟ್ಟೂರು ಗ್ರಾಮಗಳು ಎಲ್ಲೂರು ತಾಲುಕದಲ್ಲಿ ಈಗಲೂ ನಿಂತಿವೆ. ಕಮ್ಮೆನಾಡೆಂಬುದು ನೆಲ್ಲೂರು ಜಿಲ್ಲೆಯಲ್ಲಿತ್ತೆಂದು ಶಾಸನಗಳಿಂದ ಕಾಣುತ್ತದೆ. ಪೊನ್ನನ ಪೋಷಕರ ತಂದೆ ಇಲ್ಲಿಂದ ಬಂದನಲ್ಲದೆ ಪೊನ್ನನೇ ಅಲ್ಲಿಂದ ಬಂದನೆಂದು ಶಾಂತಿಪುರಾಣದಲ್ಲಿ

ಹೇಳಿದೆಯೇ ? ರಾಯ್ಸ್ ಸಾಹೇಬರು ಹಾಗೆ ಬರೆದಿದ್ದಾರೆ. ದಕ್ಷಿಣದಲ್ಲಿ ತಿರುಮಲಯ್ಯಂಗಾರನ ಹಿರಿಯರು ತಮಿಳುದೇಶದಿಂದ ಬಂದಿರಬೇಕು. ಹೀಗೆ ಅನೇಕ ಭಿನ್ನದೇಶೀಯರು ಕರ್ಣಾಟಕದಲ್ಲಿ ವಾಸವಾಗಿದ್ದಿರಬಹುದಾದರೂ ಮತ್ತು ಸೀಮೆಯ ಅಂಚಿನ ಹತ್ತಿರ ಆಡುವ ಭಾಷೆಯಲ್ಲಿ ಇತರ ಭಾಷಾಸಂಪರ್ಕದ ಪ್ರಭಾವವು ಕಂಡು ಬಂದರೂ ಗ್ರಾಂಥಿಕ ಕನ್ನಡದ ವ್ಯಾಕರಣಮರ್ಯಾದೆ ಸ್ವತಂತ್ರವಾಗಿ ನಿಂತಿತು.

## ಪರಿಚ್ಛೇದ ೨

### ಭಾಷಾ ವ್ಯತ್ಯಾಸದ ಕಾರಣಗಳು

ಭಾಷೆಗಳಲ್ಲಿ ದೇಶ, ಕಾಲ, ವಿದ್ಯೆ ಇವುಗಳ ಭೇದದಿಂದ ಬೇರೆ ಬೇರೆ ಮಾರ್ಗಗಳು ಹೊರಡುವುದುಂಟು. ವೈಯಾಕರಣಿಗಳು ಗ್ರಾಮ್ಯರೀತಿಯನ್ನು ನಿಷೇಧಿಸಿ ಶಿಷ್ಟಪದ್ಧತಿಯನ್ನು ಕಾಪಾಡುವರು. ಅವರು ತಿರಸ್ಕರಿಸುವ ಮಾತುಗಳಿಗೆ ಪ್ರಮಾಣವೇ ಇಲ್ಲವೆನ್ನಕೂಡದು. ಎಣ್ಣೆ, ಬೆಣ್ಣೆ ಮನಿ ಎಂದುಚ್ಚರಿಸುವುದು ಮಾಡುವಿ, ಬೆಂಕಿ , ತಂಗಿ ಎಂದಂತೆಯೇ. ಎಳ್‌ನೆಯ್ ಬೆಳ್‌ನೆಯ್, ಮನೈ, ಮಾಡುವೆಯ್, ಬೆಂಕೆಯ್, ತಂಗೆಯ್ ಇವು ಹಳೆಯ ರೂಪಗಳು. ಕೆಲವರು ಎಕಾರವನ್ನೂ ಇನ್ನು ಕೆಲವರು ಇಕಾರವನ್ನೂ ಮಾತ್ರ ಇಟ್ಟು ಕೊಂಡರು. ಆಗೋಕೆ =ಆಗುಗೆ, ಅಕ್ಕು=ಅಕ್ಕುಂ ಆಗಾ=ಆಗ, ಆಗದು. ಇಂತಹ ಮಾತುಗಳಿಗೆ ಹಳಗನ್ನಡದಲ್ಲಿ ಪ್ರಮಾಣವಿದೆ. ದ್ಯಾವರು ಎಂದರೆ ಗ್ರಾಮ್ಯವಾಯಿತು. ಯಾಕೆ, ಹ್ಯಾಗೆ ಇವು ಶಿಷ್ಟವಾಚಕಗಳಂತೆ. ಈ ತಪ್ಪುಗಳಿಗೆ ಪ್ರಮಾಣವಿಲ್ಲ. ಆದರೆ ಸಂಸ್ಕೃತ ಪದಗಳ ಅಪಭ್ರಂಶಗಳನ್ನು ಗ್ರಾಮ್ಯವೆಂದು ತಿರಸ್ಕರಿಸದೆ ಕವಿಗಳು ಆದರಿಸಿ ವೈಯಾಕರಣರು ಅವಕ್ಕೆ ಸೂತ್ರಗಳನ್ನು ಕಲ್ಪಿಸುವರು. "ಎಂತಲೂ" ಎಂದು ಬರೆಯುವುದು ತಪ್ಪಂತೆ. ಕೊಡಗಿನ ರಾಜೇಂದ್ರನಾಮೆಯಲ್ಲಿ ಎಂತಲೂ ಅಲ್ಲದೆ ಎಂದೂ ಎಂಬ ಮಾತು ಕಾಣುವುದಿಲ್ಲ. ಮೈಸೂರು ಧಾರವಾಡ ಪ್ರಾಂತಗಳಲ್ಲಿಯೂ ಅದನ್ನು ಶಿಷ್ಟರು ಉಪಯೋಗಿಸುತ್ತಾರೆ. ಅತ್ತೆ ಮಾಡಿದ್ದು ಅಡಕಲಿಗೆ.

ಸೊಸೆಯ ಕಾಲವು ಬಾರದೆ ಹೋಗುವುದಿಲ್ಲ. ಹಳಗನ್ನಡದ ಅಪಭ್ರಂಶವೇ ಹೊಸಗನ್ನಡವೆನ್ನಬಹುದು. ಬೆರಲ್, ಕೊರಲ್ ಎಂಬಂತಹ ಮಾತುಗಳನ್ನು ಗ್ರಾಮ್ಯರರಿಯದುಚ್ಚರಿಸುವರ್ಕುಳಾಂತಭ್ರಮೆಯಿಂ, ಎಂದು

ಕೇಶಿರಾಜನು ದೂಷಿಸಿದರೂ, ಆ ಭ್ರಮೆಯೇ ಈಗಿನ ಶಿಷ್ಟಪದ್ಧತಿ. ಅರಿಸಮಾಸಗಳನ್ನು ಪ್ರಾಚೀನ ಕಾಲದಿಂದ ಲಾಕ್ಷಣಿಕರು ನಿಷೇಧಿಸಿದರೂ ಅವುಗಳನ್ನು ಅಡಗಿಸಲಾಗಲಿಲ್ಲ. ಸತಿ ಸಪ್ತಮಿಯಲ್ಲಿ ಎಕಾರವೇ ಸಾಧುವೆಂದು ಕೆಲವರು ಪ್ರತಿಪಾದಿಸಿದರೂ ಅಲ್‌ಪ್ರತ್ಯಯವನ್ನು ಇತರರು ಅಂಗೀಕರಿಸಿದರು. ಕಾಣಿಕೆ, ಏಳಿಗೆ, ಮಣಲಿನ, ವೀರತನ - ಈ ರೂಪಗಳು ತಪ್ಪೆಂದು ಕೇಶಿರಾಜನು ಹೇಳಿದರೂ ಅವನ್ನು ಶಿಷ್ಟರು ತ್ಯಜಿಸಲಿಲ್ಲ.

ಶಿಷ್ಟಮಾರ್ಗದಲ್ಲಿ ವೈಕಲ್ಪಿಕ ಪ್ರಯೋಗಗಳಿರುತ್ತವೆ. ಆದಿಸ್ವರವು ಮುಂದೆ ಬರುವಲ್ಲಿ ಮತ್ತು ಪದಾಂತ್ಯದಲ್ಲಿ ದ್ವಿತೀಯಾ ವಿಭಕ್ತಿಗೆ ದೀರ್ಘವು ಸಲ್ಲುವುದಲ್ಲದೆ ಇತರ ಸ್ಥಲಗಳಲ್ಲಿ ಪ್ರಶಸ್ತವಲ್ಲೆಂದು ನೃಪತುಂಗನ ಮತವಾಗಿತ್ತು. ಅವನ ಕಾಲಕ್ಕೆ ಮುಂಚಿನ ಶಾಸನಗಳಲ್ಲಿ ಪೀಠಮಾನ್ ಕಿಸುವಿನೆ ಕಟ್ಟಿ, ಕೋಟೆಯಾನ್, ರೋಹಿಸಿ, ಎಂಬಂತಹ ಸ್ವಚ್ಛಂದವು ಕಾಣುತ್ತದೆ. ಇದು ಗುಣವರ್ಮ, ಹರಿಪಾಲರ ಪ್ರಯೋಗವೆಂದು ವ್ಯಾಕರಣಗಳಲ್ಲಿ ಹೇಳಿದೆ. "ದೀರ್ಘೋಕ್ತಿರ್ನಯಸೇನಸ್ಯ" ಮಾತ್ರವೇ? ಪಲವು ದೇಶದೊಳಿರ್ಪ್ಪವು ಬಂದು ಭೂಪತೀ - (ಕಾದಂಬರಿ. I. ೧೨೬.) ಆ ಪ್ರಯೋಗವನ್ನು ವ್ಯಾಕರಣರಚಕರೊಳಗೆ ನಯಸೇನನೊಬ್ಬನೇ ಅನುಮೋದಿಸಿದ್ದನೆಂಬ ತಾತ್ಪರ್ಯವಿರಬಹುದು. ಕಮ್ಮ ಶಬ್ದಕ್ಕೆ ಪಂಪನ ಪ್ರಮಾಣವಿರಲಿ ಇಲ್ಲದಿರಲಿ, ಅದು ಶಾಸನಗಳಲ್ಲಿ ಸಿಕ್ಕುತ್ತದೆ.

### ದಕ್ಷಿಣೋತ್ತರ ಮಾರ್ಗಗಳು

ಶಿಲ್ಪದಲ್ಲಿಯೂ ಸಂಗೀತದಲ್ಲಿಯೂ ದೇಶಕ್ಕನುಸಾರವಾಗಿ ರೀತಿ ಭೇದಗಳಿರುವಂತೆ ಕಾವ್ಯಗಳಲ್ಲಿ ದೇಶಿಯ ಪ್ರಕಾರಗಳನ್ನು ತೋರಿಸಲಿಕ್ಕೆ ಲಾಕ್ಷಣಿಕರು ಮಾಡಿದ ಪ್ರಯತ್ನವು ಅನುರಂಜಕವಾಗಿಯೇ ಇದೆ. ಆದರೆ ಕವಿಗಳು ತಮ್ಮ ಪ್ರಾಂತದ ಪೂರ್ವ ಜನರನ್ನೇ ಅನುಸರಿಸಿ ಇತರರ ಮಾರ್ಗವನ್ನು ತ್ಯಜಿಸುವುದೂ ಇಲ್ಲ ; ಸ್ವಕಲ್ಪನೆಯನ್ನು ಅಡಗಿಸುವುದೂ ಇಲ್ಲ. ಕರ್ಣಾಟಕ ಕವಿಗಳು ಪೂರ್ವ ಕವಿಗಳನ್ನು ಸ್ಮರಿಸುವಾಗ ಸ್ವದೇಶೀಯರು ದೇಶಾಂತರದವರು ಎಂಬಂತಹ ಭೇದವನ್ನು ಲಕ್ಷ್ಯದಲ್ಲಿಟ್ಟುಕೊಂಡಂತೆ ಕಾಣುವುದಿಲ್ಲ. ನೃಪತುಂಗನು ಕೊಟ್ಟ ಉದಾಹರಣಗಳು ಕಾವ್ಯಗಳಿಂದ ಉದ್ಧರಿಸಿದ ವಾಕ್ಯಗಳೊ ಅವುಗಳನ್ನು ಅನುಕರಿಸಿ ತಾನೇ ಕಲ್ಪಿಸಿದ ವಾಕ್ಯಗಳೊ,

ಎಂಬುದು ಸ್ಪಷ್ಟವಾಗುವುದಿಲ್ಲ. ನಾಗವರ್ಮನು ಕಾವ್ಯಾವಲೋಕನದಲ್ಲಿ ಉತ್ತರ ದಕ್ಷಿಣ ಮಾರ್ಗಗಳ ಹೆಸರುಗಳನ್ನು ಮಾತ್ರ ಹೇಳಿ "ವೈದರ್ಭಗೌಡ ಮಾರ್ಗವಿಭೇದಂಬಗೆವೊಡೆಗತಾನ' ಗತಿಕಮಿದೆಂದೊಲ್ದಾದರಿಪರ್ ಕೆಲಬರ್" ಎಂದು ಬರೆದು ಈ ವಿಷಯವನ್ನು ಮುಗಿಸಿಬಿಟ್ಟಿರುವುದರಿಂದ ಸಂಸ್ಕೃತದಲ್ಲಿ ಮಾರ್ಗಭೇದವನ್ನು ನಿರೂಪಿಸಿರುವಾಗ ಕನ್ನಡದಲ್ಲಿಯೂ ಎರಡು ಮಾರ್ಗಗಳನ್ನು ತೋರಿಸಬೇಕೆಂದು ಕೆಲವರು ಪ್ರಯತ್ನ ಪಡುವರವಲ್ಲದೆ ನಿಜವಾಗಿಯೂ ಆ ಭೇದದಲ್ಲಿ ಹುರುಳಿಲ್ಲವೆಂದು ಸೂಚಿಸಿದ್ದಂತಿದೆ 'ಅರಿದುಪೀ ಪಿನಂಮಾರ್ಗಗತಿಯಂತರಿಸ ಲಾಗದಾರ್ಗಂಬಹುವಿಕಲ್ಪದೊಳ್ ಕುರಿತು ಪೂರ್ವಶಾಸ್ತ್ರ ಪದವಿಯಂತೆರೆದಿರೆ ಪೇಳ್ವೆನೆನಿಸಂ ಕನ್ನಡದೊಳ್' -- ಎಂದು ನೃಪತುಂಗನೇ ಒಪ್ಪಿಕೊಂಡದ್ದರಿಂದ ಕಾಲಕ್ರಮೇಣ ಅಳಿದುಹೋಗಬೇಕಾದ ಇಂತಹ ಭೇದವನ್ನು ತೋರಿಸುವ ಸಾಹಸವು ಇತರರಿಗೆ ನಿರರ್ಥಕವಾಗಿ ಕಂಡದ್ದರಲ್ಲಿ ಆಶ್ಚರ್ಯವಿಲ್ಲ.

### ಮೈಸೂರು ಮತ್ತು ಧಾರವಾಡ ಕನ್ನಡ ಇವುಗಳ ಅಂತರ

ಅಲಂಕಾರ, ರೀತಿ, ರಸಗಳಲ್ಲಿ ಪ್ರಾಂತದ ಅಕ್ಷಧ್ರುವಕಗಳಿ ಗನುಸಾರವಾಗಿ ಮಾರ್ಗ ಭೇದಗಳು ಪ್ರಭವಿಸದಿದ್ದರೂ ವ್ಯಾಕರಣ ವಿಧಗಳು ದೇಶಭೇದದಿಂದ ಬದಲಾಗಬಹುದು. ನೋಡುವೆಂ, ನೋಟ್ಟೆಂ, ಬರಿಸುವೆಂ ಬರಿಪೆಂ ಬರಿಪ್ಪೆಂ. ಈ ಎರಡು ಉದಾಹರಣಗಳು ಮಾತ್ರವಲ್ಲ, ಬೇಕಾದರೆ ಹನ್ನೆರಡು ಉದಾಹರಣಗಳನ್ನು ನೃಪತಂಗನು ನಿದರ್ಶಿಸಬಹುದಿತ್ತು. ಧಾರವಾಡದ ಭಾಷೆಗೂ ಮೈಸೂರಿನ ಭಾಷೆಗೂ ಇರುವ ತಾರತಮ್ಯವು ಕೆಲವು ವಾಚನ ಪುಸ್ತಕಗಳಲ್ಲಿ ಎಷ್ಟರ ಮಟ್ಟಿಗೆ ಕಾಣುತ್ತದೆಂದು ಪ್ರದರ್ಶಿಸಿ ವಿದ್ವಾಂಸರು ಕ.ಸಾ.ಪ. ಪತ್ರಿಕೆಯ ಳಳ ಪುಟಗಳನ್ನು ತುಂಬಿದ್ದಾರೆ. 'ಎರಡಕ್ಕಿಂತ ಹೆಚ್ಚು ಸಾರೆ' ಇದು ಧಾರವಾಡದ ವಿಚಕ್ಷಣೋದಿತವಂತೆ. 'ಎರಡು ಸಾರಿಗಿಂತ ಹೆಚ್ಚಾಗಿ' ಇದು ಮೈಸೂರಿನ ವಿಶೇಷ ಭಾಷಿತವಂತೆ. ನೃಪತುಂಗನು ವಿಭೇದವಿಲ್ಲದಲ್ಲಿ ವಿಶೇಷವನ್ನು ತೋರಿಸಿದ್ದಾನೆಂದು ಶ್ರೀಯುತ ನರಸಿಂಹಾಚಾರ್ಯರು ಆ ಬಡ ಕಬ್ಬಿಗರಗುಡ್ಡನ ಮೇಲೆ ಅಪವಾದವನ್ನೇಕೆ ಹೊರಿಸಿದರು? ದಕ್ಷಿಣದಲ್ಲಿ ಅಲ್ಲಾದೆ, ಮೂಡಾಯ್ ಎಂದು ಬರೆಯುತ್ತಿರಲಿಲ್ಲವೇ? ಉತ್ತರದಲ್ಲಿ ಮಹಾರಾಷ್ಟ್ರೀಯ ಶಬ್ದಗಳನ್ನು

ಕನ್ನಡದಲ್ಲಿ ಸೇರಿಸುವ ಪದ್ಧತಿ ಶಿವಾಜಿಯಿಂದೀಚೆಗೆ ಹುಟ್ಟಿದ್ದಲ್ಲ. ನರೆಯಂಗಲ್ಲ ಪನ್ನಾಸು ಎಂಬ ಮಾತು ಎಷ್ಟು ಹಳೆಯದೊ ತಿಳಿಯದು. ಕಾವ್ಯದಲ್ಲೊಂದು ಉದಾಹರಣೆ ಬೇಕಾದರೆ ಪಂಪಭಾರತದಲ್ಲಿ II ೨೦ ನೆಯ ಪದ್ಯವನ್ನು ನೋಡುವುದು.

### ಗ್ರಂಥದಲ್ಲಿ ಈ ಭೇದವಿಲ್ಲ

ನೃಪತುಂಗನು ಕನ್ನಡದ ತಿರುಳೆಲ್ಲಿತ್ತೆಂದು ಹೇಳಿದರೂ ಉತ್ತರ ದಕ್ಷಿಣ ಪ್ರಾಂತಗಳ ನಡುಮೇರೆಯಲ್ಲಿತ್ತೆಂದು ಹೇಳಲಿಲ್ಲ. ಪುರಾಣಕವಿದಿತಾಂತರಮಂ ಪೇಳ್ವೆನರಿವ ಮಾಳ್ಕೆಯೊಳೆನ್ನಾ ಎಂದು ಬರೆದಿರುವುದರಿಂದ ಆತನು ಉದಾಹರಿಸಿದ ಪ್ರಯೋಗ ಭೇದಗಳು ಒಂಭತ್ತನೆಯ ಶತಮಾನದಲ್ಲಿ ನಿಂತಿದ್ದುವೆಂಬುದೂ ನಿಶ್ಚಿತವಲ್ಲ. ಅವನ ಗ್ರಂಥದಲ್ಲೇ ನಮಗೆ ಮತ್ತು ನೋಟಿ ಎಂಬ ಉಭಯಮಾರ್ಗ ವಾಚಕಗಳೂ ಕಾಣುತ್ತವೆ. ಪಂಪನು ನಾಂದೀಪದ್ಯಗಳಲ್ಲಿ ನನ್ ಪ್ರಕೃತಿಯನ್ನು ಪ್ರಯೋಗಿಸದಿದ್ದರೂ ಬೇರೆ ಕಡೆಗಳಲ್ಲಿ ಸ್ವೀಕರಿಸಿರಬಹುದು. ಆಪು. II ೧೯ ವಚನ, XIII [illegible] ವಚನ, XIV,೩೨ ಕಮ್ಮಿತಿ ಬಣ್ಣಿಪೆಂ, ಶೋಕಿಪ್ಪೆ ಎಂಬಂತಹ ಮಾರ್ಗತ್ರಯ ಪ್ರಯೋಗಗಳೂ ಅವನ ಪುರಾಣಗಳಲ್ಲಿ ಕಣ್ಣಿಗೆ ಬೀಳುತ್ತವೆ. ಚಾವುಂಡರಾಯನು ನಾನಚ್ಯುತೇಂದ್ರಂ ನಮ್ಮಮೂವರುಮಂ, ಎನಿಪ, ಕಿಡಿಪ ಎಂಬಂತೆ ಬರೆದನೆಂದು ಪರಿಷತ್ಪತ್ರಿಕೆಯವರ ಪಾಠದಿಂದಲೇ ಕಂಡ ಮೇಲೆ ಎಂಟನೆಯ ಶತಮಾನದಲ್ಲಿ ಕಿಡಿಪೊನ್ ಎಂಬ ಪದವು ಪಟ್ಟದಕಲ್ಲಿನಲ್ಲಿಯೂ ಸೊರಬದಲ್ಲಿಯೂ ಶಾಸನಾನುಮತವಾಗಿತ್ತೆಂದು ಹೇಳಿ ಕೆಲಸವೇನು?

### ೯-೧೦ ಶತಮಾನದ ಕವಿಗಳ ಭಾಷೆ

ಕಾಲಕ್ರಮದಿಂದ ಭಾಷೆಗಳಲ್ಲಿ ರೂಪಾಂತರಗಳು ಉದ್ಭವಿಸಿ ಹಳೆತು ಮತ್ತು ಹೊಸತು ಎಂಬ ಭೇದವು ಹೊರಡುತ್ತದೆ. ಲಿಪಿಯ ಆಕಾರವೂ ಬದಲಾಗುತ್ತದೆ. ನೆಲಸಿದ ಕಾವ್ಯಕ್ಕೆ ಲಕ್ಷ ಣವು ಸತತವಾದ್ದರಿಂದ ಹೊಸ ಕವಿಗಳು ಹಳೆಯ ಕೃತಿಗಳನ್ನು ಅನುಸರಿಸುವರು. ಆದರೆ ಆಗಮಬಲಹೀನರು

ಹಳಗನ್ನಡವನ್ನು ನುಡಿದರೆ ತತ್ಕಾಲಕ್ಕೆ ದೇಸಿಯಲ್ಲವೆಂದೂ ವಿರಸವಾಗುವುದೆಂದೂ ನೃಪತುಂಗನು ಪ್ರಬೋಧಿಸಿ, ದೃಷ್ಟಾಂತವಾಗಿ ಒಂದು ಪದ್ಯವನ್ನು ಬರೆದಿರುವನು. ಹತ್ತನೆಯ ಶತಾಬ್ದದಲ್ಲಿ ರನ್ನನು ದರವುರಂ, ಅಂಟಸುಂಟಿ, ಅರಿವೊರಕ ಎಂಬಂತಹ ಮಾತುಗಳನ್ನು ಪ್ರಯೋಗಿಸಕೂಡ ದೆಂದನು --ಅ ಪು. l ೮೯ ಅದಕ್ಕೆ ೫೦ ವರ್ಷಗಳ ಮುಂಚೆ ಪಂಪನ ಮತ ಬೇರೆಯಾಗಿತ್ತು. ಆ, ಪು. l ೭೫. ರನ್ನನ ಕಮ್ಮೈಸು, ಕವಣಿಸು, ತೀವಟ; ನಾಗವರ್ಮನ ಡೋಣಿವೋಗು, ಬಿಕ್ಕರು ಭಟಾಭುರಣ; ಜನ್ನನ ನೇರಣಿ - ಪಿಸುಳ್ ಇದು ಸಂಸ್ಕೃತ ಪಿಷ್ ಅಥವಾ ವಿಶ್ರ ಧಾತುವಿನಿಂದ ಹುಟ್ಟಿರಬೇಕು. ಇಂತಹ ಪದಗಳು ಕಿಟ್ಟೆಲರವರ ನಿಘಂಟಿನಲ್ಲಿಲ್ಲ. ಪಂಪನ ಕಾವ್ಯಗಳಲ್ಲಿರುವ ಗೂಢ ಪದಗಳ ಅರ್ಥನಿರ್ಣಯಕ್ಕಾಗಿ ಕ.ಸಾ ಪರಿಷತ್ತಿನವರು ಒಂದು ಉಪಸಮಿತಿಯನ್ನು ನೇಮಿಸಿದ್ದಾರೆ. ನೃಪತುಂಗನು ಹಳೆಯದೆಂದು ಹೇಳಿದ ಕನ್ನಡಕ್ಕೆ ಮೊದಲ ಹಳಗನ್ನಡ ಎನ್ನಬಹುದು.

### ನಡುಗನ್ನಡದ ಆರಂಭ

ಹಳೆಯ ಮಾತುಗಳನ್ನು ವರ್ಜಿಸಿದವರು ಸಂಸ್ಕೃತ ಪದಗಳ ಪ್ರಯೋಗದಿಂದ ಕಾವ್ಯದ ಗೌರವವನ್ನೂ ವೈಭವವನ್ನೂ ಪಾಲಿಸಲು ಯತ್ನಿಸಿರಬೇಕು. ಹೀಗೆ ಮಾಡಿದರೆ ಘೃತವನ್ನೂ ತೈಲವನ್ನೂ ಬೆರಸಿದಂತಾಗುವುದೆಂದು ನಯಸೇನನೂ ಮುತ್ತಂ ಮೆಳಸಂ ಕೋದಂತಾಗುವುದೆಂದು ಇನ್ನೊಬ್ಬ ಕವಿಯೂ ಹೀಯಾಳಿಸಿದರು. ವಿಚಿತ್ರ ಕರ್ಣಾಟವೆಂಬ ದೂಷಣೆಗೆ ಎಡೆಗೊಡದಂತೆ ಸುಗಮಪದಗಳನ್ನೂ ತಾತ್ಕಾಲಿಕ ವ್ಯಾಕರಣ ವಿಧಿಗಳನ್ನೂ ಪ್ರಯೋಗಿಸಿ ಲೋಕಪ್ರಿಯವಾಗುವ ಹೊಸಗನ್ನಡದಲ್ಲಿ ಗ್ರಂಥಗಳನ್ನು ರಚಿಸಲಿಕ್ಕೆ ಹನ್ನೆರಡನೆಯ ಶತಮಾನದಲ್ಲಿ ನಿರ್ಭೀಕರು ಮುಖ್ಯವಾಗಿ ಲಿಂಗಾಯತರು ತೊಡಗಿದರೆಂದು ಕಾಣುತ್ತದೆ. ಇವರು ಹಳಗನ್ನಡವನ್ನು ಪೂರ್ಣವಾಗಿ ತ್ಯಜಿಸಲಿಲ್ಲ. ಅವರ ಭಾಷೆಗೆ 'ಮೊದಲ ಹೊಸಗನ್ನಡ' ಎನ್ನಬಹುದು. ಕಿಟ್ಟೆಲವರು ಪೂರ್ವದ ಹಳಗನ್ನಡವೆಂಬ ಭೇದವನ್ನು ತಿರಸ್ಕರಿಸಿ, ಇದಕ್ಕೆ ಹಳಗನ್ನಡಕ್ಕೂ ಹೊಸಗನ್ನಡಕ್ಕೂ ಮಧ್ಯದಲ್ಲಿದ್ದ ನಡುಗನ್ನಡ ಎಂಬ ಹೆಸರಿಟ್ಟಿದ್ದಾರೆ. ಈಗಿನ ಭಾಷೆಗೆ ಹೊಸಗನ್ನಡವೆನ್ನುವರು.

### ಹಳಗನ್ನಡದ ಆಡುಭಾಷೆ

ಪೂರ್ವದಲ್ಲಿ ಆಡುವ ಭಾಷೆಯಲ್ಲಿಯೇ ಗ್ರಂಥಗಳನ್ನು ರಚಿಸಿ ಅದಕ್ಕೆ ವ್ಯಾಕರಣವನ್ನು ಬರೆಯುತ್ತಿದ್ದಿಲ್ಲ. ನಾಗವರ್ಮ ಕೇಶಿರಾಜರು ತಾವು ಅನುಮೋದಿಸದ ಮರ್ಯಾದೆಗಳನ್ನು, ಕಾವ್ಯ ಗೃಹೀತವಾದರೂ ತಿರಸ್ಕರಿಸಿದರು. ಅವರು ಉಪೇಕ್ಷಿಸಿದ ಕೆಲವು ಪ್ರಯೋಗಗಳನ್ನು ಭಟ್ಟಾಕಲಂಕನು ಆದರಿಸಿದನು. ಈತನ ಶಬ್ದಾನುಶಾಸನವೂ ಸಮಾನಕಾಲಿಕ ಭಾಷೆಯ ವ್ಯಾಕರಣವಲ್ಲ. ಶಾಸನಗಳಲ್ಲಿ ಗದ್ಯಭಾಗಗಳನ್ನು ಕೂಡ ಆಡುವ ಭಾಷೆಯಲ್ಲಿ ಬರೆಯುತ್ತಿದ್ದರೆಂದು ಹೇಳಲಿಕ್ಕಾಗದು. ಕ್ರಿ.ಶ. ೧೧೬೫ ನೆಯ ಸಂವತ್ಸರದಲ್ಲಿ ಭೀಮಾತೀರದ ಬಳಿಯಲ್ಲಿ "ಜಪ ಸಮಾಧಿಶೀಲಸಂಪನ್ನರಪ್ಪ ಮಾದಿರಾಜಪ್ರಮುಖಮಶೇಷಮಹಾಜನಂಗಳುಂ ಮಹಾಪ್ರಧಾನಂಯಮ್ಮ ಣಯ್ಯದಂಡನಾಯಕ ಪ್ರಮುಖಕರಣಗಳುಮಂತಿನಿಬರುಂ ಮಾಡಿಸಿದ ಪ್ರತಿಷ್ಠೆ"--- ಹೀಗೆ ಶಾಸನದಲ್ಲಿ ಭಾಷೆಯಂತೆ ಜನರು ಮಾತಾಡುತ್ತಿರಲಿಲ್ಲವೆಂದು ಲಿಂಗಾಯತರು ಗ್ರಂಥಗಳಿಂದ ಸ್ಪಷ್ಟವಾಗುತ್ತದೆ. ಆದರೂ ಶಾಸನಗಳಲ್ಲಿ ವ್ಯಾಕರಣಕ್ಕೆ ವಿರುದ್ಧವಾದ ಹೊಸ ಪ್ರತ್ಯಯಗಳು ಕಂಡರೆ ಚರಿತ್ರ ವಿಮರ್ಶಕರಿಗೆ ರೂವಾರಿಗಳ ತಪ್ಪುಗಳೇ ಬೋಧಕವಾಗಬಹುದು. ನೃಪತುಂಗನ ಕಾಲಕ್ಕೆ ಮುಂಚೆ ಬರೆದ ಗ್ರಂಥಗಳು ಸಿಕ್ಕಿಲ್ಲವಾದ ಕಾರಣ ಹಳೆಯ ಶಾಸನಗಳಿಂದ ಕೆಲವು ವಾಕ್ಯಗಳನ್ನು ಕೆಳಗೆ ಎತ್ತಿಹಾಕಿವೆ.

### ಉತ್ತರದ ಶಾಸನಗಳು--

ಸ್ವಸ್ತಿಶ್ರೀಮತ್ಪ್ರಿಥುವಿವಲ್ಲಭಮಂಗಲೀಶನಾಕಲ್ಮನೆಗೆಇತ್ತೊದುಲಗಂಜಿಗೇಸರಂ ದೇವರ್ಕೆಪೂನಿಱು ವಮಾಲಾಕಾರರ್ಗ್ಗೆ ಅರ್ಧವಿಸದಿ ಇತ್ತೊದಾನಱುವೊನ್ ಪಂಚಮಹಾಪಾತಕನಕ್ಕುಂ ಏವಿನೆಯಾನರಕದಾಪುಱು ಅಕ್ಕುಂ (ಸುಮಾರು ಕ್ರಿ.ಶ. ೫೭೮).

ಸ್ವಸ್ತಿಶ್ರೀಕಲಿಬಲ್ಲಹನ್ ಪೃಥುವಿರಾಜ್ಯಗೆಯೆ ಚೋೞ ಮಹಾದೇವಿಯರ ದೇಗುಲದ ಸೂಳೆಗೋಯಿನ್ನ ಪೊಡ್ಡಿಯ ಮಗಳು ಬಾದಿಪೊಡ್ಡಿಯೆಂಬೋಳ್ ಉತ್ತಮಗೋಸಾಸಮಿ ಟ್ಟೊ ಭೂಮಿದಾನಮುಂ ಉಭಯಮುಖಿಯಂಕೊಟ್ಟಾಳ್

(ಕ್ರಿ.ಶ.ಸು. ೭೭೦.)

ಕುಲಪ್ಪಯ್ಯಂ ಬಿನ್ನಪಂಗೆಯ್ಯೆ ದೇವಣ್ಣಯ್ಯಂ ಅಮೋಘವರ್ಷದೇವರೊಳ್ ರಾಜಶ್ರಾವಿತಂ ಮಾಡಿ ತದನುಮತದಿನ್ದಿವ್ವೊರ್ವರುಂ ನಿಗ್ಗುಂದದನೂಱ ಪ್ಪದಿಂಬರುಂ ಮಹಾಜನದ ಕಾಲಂ ಕಚ್ಚಿ ತುಪ್ಪದೆಱೆಯಂ ಸಬೋಧಕಮಾಗಿ ಬಿಟ್ಟೊರ್, ಈ ಧರ್ಮಮಂ ಕಾದೊಂ ವಾರಣಾಸಿಯುಳ್ ಸೂರ್ಯಗ್ರಹಣದೊಳ್ ಸಾಸಿರ ಕವಿಲೆಯುಂ ವೇದವಿದರ್ಕ್ಕಶಪ್ಪ ಬ್ರಾಹ್ಮಣರ್ಕ್ಕಳ್ಗೆ ಕೊಟ್ಟ ಪುಣ್ಯಫಲಮನಯ್ದುವೊನ್ --(ಕ್ರಿ.ಶ. ೮೬೭)

ದಕ್ಷಿಣದ ಶಾಸನಗಳು --

·ಸ್ವಸ್ತಿಶ್ರೀನಿವ್ವನೀತರಾಕಿಱುಯಾಮಗನ್ದಿರ್ಕದುವಟ್ಟಿಯರಿನ್ದಮ್ ವಲ್ಲವರಸರಿನ್ದಜ್ಜೊಂಗೊವ್ವೆಪದಸೂಡಿದೊರಾ ಅನುಜೊ ಇನ್ದು ಕನಲ್ಲೊಳಿನನ್ದಿಯಾಲವಿಟ್ಟದು ಪಡೆವ್ಯೆಲಾಮು ಅಮಸಪಾಲುಮ್ (ಕ್ರಿ.ಶ.ಸು ೪೮೦)

ಶಿವಮಾರಂ ಪ್ರಿಥುವೀರಾಜ್ಯಂ ಕೆಯೆವೆಡಿರುನ್ ಸ್ವರ್ಗತ್ತಿಱೆಯ ಮರಿಯಾದಿಕೊಟ್ಟಾನ್ ಸೇಬೆಗೆವಿಟ್ಟಾರ್ ಈದಾನಟುತ್ತೋನ್ ಪಞ್ಚ ಮಹಾಪಾತಕಸಂಯುಕ್ತನಪ್ಪೋನ್. ಒಕ್ಕಲುಳ್ಳೊತ್ತಿಮಕ್ಕಳ್ಪುಟ್ಟಲ್ಕ ಪುಟ್ಟಿದೊಂದುಪುರೀಗ (ಕ್ರಿ.ಶ. ಸು. ೭೦೦)

ಒಪ್ಪುಸಮಸ್ತುತನ್ದು ಭಗವನ್ತರಕಯ್ಗಳಾನತಿಕೊಟ್ಟುಮ।ತ್ತ ಪ್ರತಿಮಂಕ್ರಿ ತಾನ್ತಶದ್ಯಸಂರಿಪುಸೇನೆಯನೊಟ್ಟಿಸುತ್ತು।ನಿ।ನ್ದೊಪ್ಪಭಟರ್ಕಳನ್ನಿರಿದ ಸುಂಗೊಳೆ ಪೊನ್ದಿದಕೇಸವಯ್ಯನನಾ। ನಾಪ್ಪೊರ್ಗಳನ್ನೆಗಟ್ಟೆಗುಪಮಾಗಿ ಜಸಂಭು ವನನ್ತರಾಳದೊಳ್ (ಕ್ರಿ.ಶ.ಸು.೯೦೦)

ಬಿಂದು ಶಬ್ದಗಳು

ಹಳಗನ್ನಡವನ್ನೋದುವಾಗ ಪ್ರಕೃತಿಗಳಲ್ಲಿಯೂ ಪ್ರತ್ಯಯಗಳಲ್ಲಿಯೂ ಬಿಂದುಗಳು ಪ್ರಮುಖವಾಗಿ ಕಾಣುತ್ತವೆ. ಕೇಶಿರಾಜನು ನಿತ್ಯಬಿಂದುಗಳೆಂದು ಉದಾಹರಿಸಿದ ೬೭ ಪದಗಳಲ್ಲಿ ಹಲವು ಆತನ ವಿಕಲ್ಪಬಿಂದುಗಳಾಗಿದ್ದುವು. ನಾಗವರ್ಮನು 'ಸೆರಗು'; ಅಗ್ಗಳನು 'ಬೇಟೆ'; ಹರೀಶ್ವರನು 'ಸಾದು' ಎಂದು

ಬರೆದಿದ್ದರು. ಕೊಡಂತಿ , ಪಡಂಗು, ಎರಂಕೆ, ಕುರುಂಬು, ಒರಂತೆ, ಕೊರಂತೆ, ತೂಂಕು, ಪೇಂಕುಳಿ, ಕುಸುಂಬೆ, ಗೋಂಟು, ಮೇಂಟಿ, ಬಣಂಜಿಗ ಇವು ನಿರನುನಾಸಿಕಗಳಾಗಿ ನಾಚಿರಾಜೀಯದಲ್ಲಿ ಕಾಣುತ್ತವಾದರೆ ಕೇಶಿರಾಜನ ಕಾಲದಲ್ಲಿ ವಿಕಲ್ಪಬಿಂದುಗಳಾಗಿದ್ದಿರಬೇಕು. ಒಯ್ಯನೆ, ಮೇಯಿಸು, ಕಲ್ಲೆನೆ, ಕೊಲ್ಲಣಿಗೆ, ಗಾವೆ, ಸೇವೆ ಮುಂತಾದ ಕೆಲವು ಪದಗಳಲ್ಲಿಯ, ಲ, ವಕಾರಗಳನ್ನು ಅನುನಾಸಿಕಗಳಾಗಿ ಉಚ್ಚರಿಸಿ ಅವುಗಳ ಹಿಂದೆ ಬಿಂದುವನ್ನು ಬರೆಯುತ್ತಿದ್ದರು. ಆದಂ ಏಗಂ, ಕೆನ್ನಂ, ಭೋಂಕನೆ, ವೆರಂ, ವಲಂ, ಇನಂ ಪ್ರತ್ಯಯ ಇವುಗಳ ಪ್ರಯೋಗವು ನಿಂತುಹೋಗಿದೆ. ಅರಸಂ -ಸನಿಂ-ಸನಿಂದಂ-ಸನತ್ತಣಿಂದಂ ಆಂ, ನೀಂ,ತಾಂ, ಗೈದಪೆಂ -ಪಂ, ದೆಂ,ದಂ, ವೆಂ, ವಂ, ಯ್ಯಿಂ, ಯ್ಯೆಂ, ಯಂ,ಯುತಂ, ಸಾಲ್ಗುಂ, ಬೇಳ್ಕುಂ, ಎನಗಂತನಗಂ ಆನೆಯುಂ, ಕುದುರೆಯುಂ ಇಂತಹ ಪದಗಳಲ್ಲಿ ಅಂತ್ಯದ ಬಿಂದು ನಿಂತಿಲ್ಲ. ಅರಸಂಗೆ, ಅರಸಂಗಳ್, ಅಂತು, ನೋಂತು, ಸೀಂತು, ಪುಟ್ಟುಂಗುರುಡಂ, ಮಿಂಚುಂಬುಳು, ತಡಂಗಾಲ್. ಇಂತಹ ಪದಗಳಲ್ಲಿ ನಡುವಣ ಬಿಂದು ಲೋಪವಾಗಿದೆ. ಆದರೆ ಅಲ್ಲಾಡು, ಹಂದಾಡು;ಪಾವಸೆ, ಹಾಂಸೆ ;ಪೊರ್ದು, ಹೊಂದು; ಬಾಸುಳ್, ಬಾಸುಂಡೆ; ಅಹಗೆ, ಹಾಂಗೆ; ಪಸು, ಹಂಚು; ಸುಟ್ಟುರೆ, ಸುಂಟುರೆ ಇಂತಹ ಪದಗಳಲ್ಲಿ ಬಿಂದು ಹೊಸತಾಗಿ ಪ್ರವೇಶಿಸಿದೆ. ಇಲ್ಲಿ ಲ ವಕಾರಗಳನ್ನು ಮೊದಲಿಂದ ಅನುನಾಸಿಕಗಳಾಗಿ ಉಚ್ಚರಿಸುತ್ತಿರಬಹುದು. ಹಾಂಗೆ ಎಂಬುದು ಪಾಂಗಿನಿಂದ ಹುಟ್ಟಿರಬಹುದೆಂದರೆ ಹೀಂಗೆ ಹೇಗೆ ಬಂತು?

### ಹೊಸಗನ್ನಡಕ್ಕೆ ತಿರುಗಿದ್ದುದು

ಪ್ರಥಮೆ ದ್ವಿತೀಯೆಗಳಲ್ಲಿ ಅನುಸ್ವಾರವನ್ನು ಕವಿಗಳೇ ೧೧ನೆಯ ಶತಮಾನದಲ್ಲಿ ಲೋಪಿಸುತ್ತಿದ್ದರು. ಈಶ್ವರಪುತ್ರಕೃತಿಗೆ ನಾಯಕನಕ್ಕೆ, ಎನ್ನಕೊಂದೆ - ನಾಗವರ್ಮ;ತಲೆಯ ತಾಟಿಸಿ - ಚಾವುಂಡರಾಯ. ಕನ್ನಡದ ತಿರುಳಲ್ಲಿ ಸೇಣೆಯನಿತ್ತಧರ್ಮ ಎಂದು ೮ನೆಯ ಶತಮಾನದಲ್ಲಿಯೂ ದಕ್ಷಿಣದಲ್ಲಿ ರಾಮೇಶ್ವರ ದೇವಗೆ ಈರ್ಮತ್ತರ್ ಮಣ್ಣಬಿಟ್ಟಂ ಎಂದು ೯ನೆಯ ಶತಮಾನದಲ್ಲಿಯೂ ಶಾಸನಗಳಲ್ಲಿ ಬರೆದರು. ಆಡುವ ಭಾಷೆಯಲ್ಲಿ ಮೊದಲಿಂದ ಪ್ರಕೃತಿಯನ್ನೇ ಪ್ರಥಮೆಯಾಗಿ ಪ್ರಯೋಗಿಸುತ್ತಿರಬೇಕೆಂದು ಕಿಟ್ಟೆಲವರು ಊಹಿಸಿದ್ದಾರೆ. ತಮಿಳಿನಲ್ಲಿಯೂ ಕನ್ನಡದಲ್ಲಿಯೂ ಅವಾಂ,

ಇವಾಂ ಎಂದು ಅನುಸ್ವಾರದೊಡನೆ ಉಚ್ಚರಿಸುವ ಮಾತುಗಳಲ್ಲಿ ಇಲ್ಲದ ಬಿಂದುವನ್ನು ವೈಯಾಕರಣರು ಸೇರಿಸಿದರೆಂದು ಹೇಳಲಿಕ್ಕಾಗದು. ತೃತೀಯೆಯಲ್ಲಿ ಅಕಾರಾಂತಗಳಿಗೆ ಮಾತ್ರ ಕ್ರಮದೆ, ಭಯದೆ ಎಂಬಂತೆ ಎ ಪ್ರತ್ಯಯವನ್ನು ಹಚ್ಚುತ್ತಿದ್ದರೆಂದು ಶಬ್ದಮಣಿದರ್ಪಣದ ೧೧೭ನೆಯ ಸೂತ್ರದ ವಿಚಾರದಲ್ಲಿ ಬರೆದವನು ಅಳ್ತಿಯೆ, ಕಿಸುವಿನೆ, ಎಂಬಂತಹ ಪ್ರಯೋಗಗಳನ್ನು ಮರೆತಿರಬೇಕು. ಎಕಾರವೇ ಇಕಾರವಾಯಿತೆಂದು ಕೆಲವರ ಅಭಿಪ್ರಾಯವಿದೆ. ಸಪ್ತಮಿಯಲ್ಲಿಯೂ ಈ ಪ್ರಯೋಗವಿತ್ತು; ಅವಯವದೆರ್ದೆಗೊಳ್ವುದು; ನಾಗವರ್ಮ; ಮುನೀಂದ್ರರ ಪಕ್ಕದೆ ತಪಮಂ ಕೈಕೊಂಡು - ಚಾವುಂಡರಾಯ. ತಮಿಳಿನಲ್ಲಿ ಮರತ್ತಿನ್ ತೃತೀಯ ಮರತ್ತಿಲ್ ಸಪ್ತಮಿಮೆ, ಆಗಿರುವುದರಿಂದ ಆಡುವ ಭಾಷೆಯಲ್ಲಿ ಎಕಾರಕ್ಕಿಂತ ಇಕಾರವು ಹಳೆಯದಾಗಿತ್ತೊ ಏನೊ. ಹಾಗೆಯೇ ಮಡದಲ್ಲಿ ನೂಂಕೆ =ಕಾಲಿ ನಿಂದ ನೂಕಲು - ಎಂಬುದಕ್ಕೆ ಬದಲಾಗಿ ಮಡದಲಿ ನೂಂಕೆ ಎಂದು ನಾಗವರ್ಮನು ಬರೆದಿರುವುದರಿಂದ ಈ ಪ್ರತ್ಯಯಾಂತರವು ಹಳೆಯದಾಗಿ ಕಾಣುತ್ತದೆ.

ಪದಾಂತ್ಯ ವ್ಯಂಜನಗಳು ಸ್ವರಾಂತಕ್ಕೆ

ಹಳಗನ್ನಡದಲ್ಲಿದ್ದ ಪದಾಂತ್ಯ ವ್ಯಂಜನಗಳು ಈಗ ಸ್ವರಿತವಾಗುತ್ತವೆ. -- ಬಾಯ್, ಬಾಯಿ;ಪೇರ್, ಬೇರು;ನಡೆದನ್, ನಡೆದನು;ನಡೆದಿರ್, ದಿರಿ;ನಡೆದಳ್,ದಳು. ಸ್ವರಗಳನ್ನು ಹಚ್ಚದೆ ವ್ಯಂಜನಗಳಿಗೆ ಸ್ಫುಟೋಚ್ಚಾರವಿಲ್ಲ. ಅವು ಅರೆಮಾತ್ರಿಕೆಗಳೆಂದು ಕಾವ್ಯಾವಲೋಕನದಲ್ಲಿ ಹೇಳಿದೆ. ಪದಾಂತ್ಯದಲ್ಲಿ ಯ್,ರ್,ಲ್, ಳ್,ಣ್ ಇವು ಕಾವ್ಯಗಳಲ್ಲಿ ವ್ಯಂಜನಗಳಾಗಿ ಸಲ್ಲುತ್ತಿದ್ದುವು. ಲೋಕರೂಢಿಯಲ್ಲಿ ಇವನ್ನು ಅರ್ಧ ಅಥವಾ ಪೂರ್ಣಸ್ವರಾನ್ವಿತವಾಗಿ ಉಚ್ಚರಿಸುತ್ತಿರಬಹುದು. ಕೆಲವು ಪ್ರಾಂತಗಳಲ್ಲಿ ಕೊಂಬರು ಎಂಬುದನ್ನು ಕೊಂಬಱು ಎಂಬಂತೆ ನಾಡವರು ಈಗಲೂ ಉಚ್ಚರಿಸುತ್ತಾರೆ. ಶಾಸನಗಳಲ್ಲಿ ದೇವನು, ಮಗಳು, ಶ್ರೀಮತು ಎಂಬಂತೆ ಉತ್ತರದಲ್ಲಿಯೂ ದಕ್ಷಿಣದಲ್ಲಿಯೂ ಪ್ರಾಚೀನ ಕಾಲದಿಂದ ಬರೆಯುತ್ತಿದ್ದರು. ಇದೇ ಹೊಸಗನ್ನಡದ ಉ ಪ್ರತ್ಯಯಕ್ಕೆ ಕಾರಣವಾಗಿರಬಹುದೆಂದು ಫ್ಲೀಟ್ ಸಾಹೇಬರು ಹಲವು ವರ್ಷಗಳ ಹಿಂದೆ ಸೂಚಿಸಿದರು. ಕೇಶಿರಾಜನ ಧಾತುಪಾಠದಲ್ಲಿ ಹನಿ, ನೆನೆ ಧಾತುಗಳ ಮಧ್ಯದಲ್ಲಿ ನಾನ್, ಬಾನ್ ಎಂಬಂತಹ

ಹತ್ತು ವ್ಯಂಜನಾಂತಗಳೂ ಜರಿ, ಪೊರೆ ಧಾತುಗಳ ನಡುವೆ ೪೦ ವ್ಯಂಜನಾಂತಗಳೂ ಹೇಗೆ ಪ್ರವೇಶಿಸಿದುವು? ಅರೆಮಾತ್ರಿಕೆಗಳಿಗೆ ನಿಜ ಸ್ಥಾನವಿಲ್ಲೆಂದು ನಿಶ್ಚಯವಿಲ್ಲದ್ದೇ ಕಾರಣವಾಗಿರಬಹುದು. ರೂವಾರಿಗಳು ಕೆಲವು ಸಾರಿ ವಿರಾಮದಲ್ಲಿ ಎಕಾರದ ಗುರುತನ್ನೂ ಕೆತ್ತುತ್ತಿದ್ದರಂತೆ. ಇದು ಅಜ್ಞಾನದಿಂದಲೇ ಆಗಿರಬಹುದು. ಪದಾಂತ್ಯ ವ್ಯಂಜನಕ್ಕೆ ಅವ್ಯಕ್ತವಾಗಿ ಎಕಾರವನ್ನು ಹಚ್ಚುವ ಪದ್ಧತಿ ಆಗ ಹುಟ್ಟುತ್ತಿರಲೂಬಹುದು. ಮಾಡುತ್ತಿರ್ಪೆನ್-- ತಿಹೆನು--ತಿಹೆನೆ--ತ್ತೇನೆ; ಮಾಡುತ್ತಿರ್ಪರ್-- ತಿಹರು-- ತಹರು--ತಹರೆ --ತ್ತಾರೆ.

ಪ ದಿಂದ ಹ

ಹುಟ್ಟುಗನ್ನಡದಲ್ಲಿ ಹಕಾರವಿರಲು ಕಾರಣವಿರಲಿಲ್ಲ. ಆದರೂ ಹಳಗನ್ನಡದಲ್ಲಿ ಪಕಾರವಿದ್ದ ಹಲವು ಪದಗಳಲ್ಲಿ ಆ ವರ್ಣವು ಆದೇಶವಾಗಿ ಬಂತು. ನಮಗೆ ಗ್ರಂಥಸ್ಥವಲ್ಲದ ಹಳಗನ್ನಡವು ಗೊತ್ತಿಲ್ಲದಿರುವುದರಿಂದ ಕೆಲವು ಮಾತುಗಳ ಮೂಲವು ಸಂದಿಗ್ಧವಾಗಿದೆ. ಪೆರ್ಕರಿಕೆ, ಹಕ್ಕರಿಕೆ;ಪಿರಿಗು , ಹಿಗ್ಗು; ಪುಟ್ಟಗ, ಹುಡುಗ ಇಂತಹ ವ್ಯುತ್ಪತ್ತಿಗಳನ್ನು ಸೂಚಿಸಬಹುದು. ಹಯ್ಕಳು, ಹಾಗಲ, ಹೀರೆ - ಇವುಗಳಲ್ಲಿ ತಮಿಳಿನ ಪಕಾರವಿರಬೇಕಿತ್ತು. ಅಕಾರಕ್ಕೆ ಹಕಾರ ಬರುವುದಿದೆ -- ಅಗ್ಗಿ , ಹಗ್ಗಿ ;ಆಗೇವು ಹಗೇವು ;ಅಗುರು, ಹಗುರ. ತದ್ಭವಗಳಲ್ಲಿ ಪ್ರಾಕೃತದ ಹಕಾರವು ಬಂದಿರಬಹುದು. -- ವೈಧೇಯ, ಹೆಡ್ಡ; ಪ್ರೇಷ್ಯಾ , ಹೆಟ್ಟುಗೆ ಆದೇಶವು ದೇಶೀಯೊಳ್ಚೆಲ್ಲು ಎಂದು ಕೇಶಿರಾಜನಿಗೆ ತೋರಿತು. ಅಪ್ಪು, ಇಪ್ಪು, ಎಪ್ಪು ಎಂಬ ಪದಗಳಲ್ಲಿ ಹುಟ್ಟುಗನ್ನಡದಲಿಲ್ಲದ ಷಕಾರವು ನೆಲೆಗೊಂಡಿದೆ. ಸಂಸ್ಕೃತದ ಪ್ರಭಾವವು ಕನ್ನಡದಲ್ಲಿ ಹಚ್ಚುತ್ತ ಬಂದುದಕ್ಕೆ ಈಯೆರಡು ವ್ಯಂಜನಗಳ ಪ್ರೀತಿಯೇ ಎ ಒಂದು ನಿದರ್ಶನವಾಗಿರಬಹುದು.

## ವಿಚಾರ

ಹಳಗನ್ನಡದಲ್ಲಿದ್ದ ಱ ೞ ಅಕ್ಷರಗಳು ಈಗ ಪ್ರಯೋಗದಲ್ಲಿಲ್ಲ. ಈ ದ್ರಾವಿಡ ವರ್ಣಗಳು ಸಂಸ್ಕೃತದಲ್ಲಿಲ್ಲದಿದ್ದರೂ ಅವನ್ನು ತದ್ಭವಗಳಲ್ಲಿ ಕನ್ನಡಿಗರು ಪ್ರಯೋಗಿಸುತ್ತಿದ್ದರು. ಚಾರು, ದುರುದುಮ್ಮಿ,ಬಾರಿಸು, ರಾಟಳ, ರೋಡಾಡು, ರಂಜೆ, (ರೋಹಭದ?) ರಟ್ಟೆ (ಉರಸ್ಥ?), ಗಳಿಗೆ ,ಮಳಿಗೆ,

ಪಳಿವಾವುಗೆ ಇತ್ಯಾದಿ, ಇವನ್ನು ರ,ಳ ವರ್ಣಗಳೊಂದಿಗೆ ಪ್ರಾಸಕ್ಕಿಡುವುದು ತಪ್ಪಾಗಿತ್ತು, ಱಕಾರವು ೧೮ನೆಯ ಶತಾಬ್ದದ ವರೆಗೆ ಉಳಿಯಿತು. ಆದರೆ ಪ್ರಾಸನಿಷೇಧವನ್ನು ಹಳೆಯ ಷಟ್ಪದಿಗಳಲ್ಲೇ ಉಪೇಕ್ಷಿಸುತ್ತಿದ್ದರು. --ಬಸವ ಪು V೪೭, VII೨೬; ಜೀವಂಧರಚರಿತೆ I೪೪, II೫೭. ಈಚಿನವರು ಹಳಗನ್ನಡವನ್ನು ಬರೆಯುವಾಗಲೂ ಅಲಕ್ಷಿಸುತ್ತಿದ್ದರು. ಚಿಕದೇವರಾಜವಿಜಯಂ III ೧೧೫ ಹಲವು ಪದಗಳಲ್ಲಿ ಸರಿಯಾದ ವರ್ಣವನ್ನು ಹಾಕದಿದ್ದರೆ ಅರ್ಥಪಲ್ಲಟವಾಗುತ್ತಿತ್ತು -- ಅರಸು, ಅರಿ, ಅರೆ, ಅವರ, ಆರು, ಊರು, ಎರೆ, ಏರು, ಒರೆ, ಕರೆ, ಕಾರ್, ಕಿರಿ, ಕೆರೆ, ಕೇರು, ಕೊರೆ, ಚೀರು, ಜರಿ, ತರಗು, ತೆರೆ, ತೊರೆ, ಪಾರ್, ಪೆರೆ, ಪೆಸರ್, ಬರೆ, ಬರಿ, ಬಾರಿಸು, ಬಿರಿ, ಬೆರೆ, ಮರೆ, ಮಾರು, ಮುರಿ, ಮೊರೆ, ಸರಿ, ಸಾರು, ಸೆರಗು, ಸೆರೆ, ಹರಿ, ಹೊರಡು, ಹೊರೆ. ಱಕಾರದ ಪ್ರಯೋಗವು ೧೩ನೆಯ ಶತಾಬ್ಧದಲ್ಲಿ ನಿಂತುಹೋಯಿತು. ಪ್ರಾಸನಿಷೇಧವನ್ನು ೧೨ನೆಯ ಶತಮಾನದಲ್ಲಿ ಹರೀಶ್ವರನು ಪ್ರತಿಜ್ಞಾಪುರಸ್ಸರವಾಗಿ ಉಲ್ಲಂಘಿಸಿದನು. ಆ ಕಾಲದಲ್ಲಿ ಜೈನ ಕವಿಗಳ ಪ್ರಯೋಗವೂ ಅವ್ಯವಸ್ಥಿತವಾಗಿತ್ತು. ನೇಮಿ ಪು I ೮೩. III ೧೦೮. ಹುಟ್ಟುಗನ್ನಡದ ಲ ವರ್ಣಕ್ಕೆ ಳಕಾರವನ್ನು ಪ್ರಾಸವಾಗಿಡಬಹುದೆಂದು ಹರೀಶ್ವರನು ಹೇಳದಿದ್ದರೂ ಅವನ ವಿಪಥಾನುರಾಗವು ಅಷ್ಟರಮಟ್ಟಿಗೂ ಹೋಗುತ್ತಿತ್ತು. ಗಿ.ಕ IV ೧೫೬. ದಕ್ಷಿಣದವರಿಗಿಂತ ಉತ್ತರದವರಿಗೆ ಈ ವರ್ಣದ ಮೇಲೆ ಪ್ರೀತಿ ಹೆಚ್ಚಾಗಿತ್ತು. ಅದು ಳಕಾರಕ್ಕಿಂತ ಹೆಚ್ಚಾಗಿ ದೇವನಾಗರಿಯ ಅಕ್ಷರವನ್ನು ಹೋಲುತ್ತಿತ್ತೆಂಬುದೇ ಇದಕ್ಕೆ ಕಾರಣವಾಗಿರಬಹುದು. ಅಳವೆ, ಅಳಿ, ಆಳ, ಇಕ್ಕಳ, ಉಳಿ, ಎಳೆ, ಕೀಳ್, ಕುಳ, ಗುಳ, ತಳೆ, ತಾಳ್, ತೊಳಸು, ದಳ, ನಾಳ, ಪಾಳಿ, ಪುಳಿ, ಪೊಳೆ, ಬಾಳ್, ಇತ್ಯಾದಿ ಪದಗಳಲ್ಲಿ ವರ್ಣಭೇದದಿಂದ ಅರ್ಥಭೇದವಾಗುತ್ತಿತ್ತು.

ಹ.ಗ.ದಿಂದ ಹೊಸಗನ್ನಡಕ್ಕೆ ತಿರುಗಿದ ಶಬ್ದಗಳು

ಸಂಸ್ಕೃತದ ಸ್ವರಗಳೂ ವ್ಯಂಜನಗಳೂ ಪ್ರಾಕೃತದಲ್ಲಿ ಹೇಗೆ ಬದಲಿಸಿದುವೆಂದು ತೋರಿಸಲಿಕ್ಕೆ ಸೂತ್ರಗಳನ್ನು ಕಲ್ಪಿಸಿದಂತೆ ಹೊಸಗನ್ನಡಕ್ಕೆ ಸೂತ್ರಗಳನ್ನೂ ಬರೆಯಬಹುದು -- ಇಸು, ಎಸೆ ;ಇಮೆ, ಎಮೆ, ಎವೆ; ಇರಿಚಲ್, ಎರಚಲು; ಗಿಡು, ಪುಳು; ಗಿಡ, ಹುಳ; ಸುಡುಬಳಿ, ಸೊಡಬಲಿ;

ಅನ್ನೆಗಂ, ಅನಕ, ತೊವಲ್ ತೊಗಲು; ತೇಳ್, ಚೇಳು ;ಅಲಿಕಲ್, ಆಣಿಕಲ್ಲು; ಮೊಳ, ಮೊಣ ; ತಲ್ಲಳ, ತಲ್ಲಣ; ತನತು, ತನ್ನದು; ಇರುಮ್ಬೆ, ಇರುವೆ; ಇರ್ಪ್ಪನ್ ಇರುವನು ;ದೇವರ್ಗೆ, ದೇವರಿಗೆ ;ಪೊಳ್ತು ,ಹೊತ್ತು; ಗಳ್ದೆ ಗರ್ದೆ ಗದ್ದೆ; ಗೈದೊಡೆ, ಗೈದರೆ: ಇಂತಹ ಉದಾಹರಣಗಳನ್ನು ಲಕ್ಷಿಸಿ ಸೂತ್ರಗಳನ್ನು ಕಲ್ಪಿಸುವುದು ಪ್ರಯಾಸಕರವಲ್ಲ. ಗೈದೊಡೆ ಎಂದರೆ ಗೈದಕಾಲದಲ್ಲಿ ಎಂಬರ್ಥವೂ ಆಗುತ್ತಿತ್ತು - ಎರಿಗಾರಿಸತ್ತೊಡೆ ಕಲ್ನಟುಗೊಟ್ಟರ್; ದೇಗುಲ ಮಮ್ಮಾಡಿಸಿದಡೆ ಕೊಟ್ಟ ಮಣ್ಣು.....

ಶೈಲಿಯಲ್ಲಿ ಹೊಸಗನ್ನಡಕ್ಕಿಂತಲೂ ಹಳಗನ್ನಡವು ಸುಸಂಹತವಾಗಿತ್ತು. ಕೆಲವರಿಗೆ ದೀರ್ಘೋಕ್ತಿಗಳು ಪ್ರಿಯವಾಗಿದ್ದುವು. ನೃಪತುಂಗನು ಇಂತಹ ಸ್ವಚ್ಛಂದವನ್ನು ದೂಷಿಸಿ ಸಂಬೋಧನೆಯ ದೀರ್ಘವು ಇಂಬಿರುವುವಲ್ಲಿ ಬರಬೇಕಲ್ಲದೆ ಹೆಚ್ಚಾಗಿ ಬಂದರೆ 'ಬಾಯಳಿದೊಳ್ಳವೊಲ್ಕರಂ ವಿರಸಕರಂ' ಎಂದನು. ಆದರೆ ಬಹುತರವಾಗಿ ಹಳಗನ್ನಡದ ಸ್ವಚ್ಛಂದೋಕ್ತಿಗಳು ಹ್ರಸಿತವಾಗಿದ್ದುವು. ಸುಖಿಮಿರ್ದನ್, ಸುಖವಾಗಿದ್ದನು; ಬೆನ್ನನೆ, ಬೆನ್ನಹಿಂದೆ ; ಇನ್ನರ, ಇಂಥವರ, ಏವುದು, ಏನು ಮಾಡುವುದು; ವೇಡಿದಪ್ಪುದು, ಬೇಕಾಗಿರುವುದು; ಗೈಲಾದಿಲ್ಲಾಗದೆ, ಗೈಯುವುದಿಲ್ಲವೆಂದಾಗದೆ ; ನೀಂ ಪುಂಡರೀಕನಯ್, ನೀನು ಪುಂಡರೀಕನಾಗಿದ್ದೀಯೆ; ನರೇಂದ್ರನೆಂದಿನಿಸಳ್ಕೆನೆ, ನರೇಂದ್ರನೆಂದಿಷ್ಟಾದರೂ ಅಂಜಲಿಲ್ಲವಲ್ಲಾ; ಆಯಿರ್ಪ ಗಿಳಿ, ಅದೊ ಅಲ್ಲಿರುವ ಗಿಳಿ – ಇಂತಹ ಉದಾರಹಣಗಳಿಂದ ನಾವು ಮಾಡುವ ಹೆಚ್ಚಿನ ಶ್ವಾಸವ್ಯಯವನ್ನು ಅಳೆಯಬಹುದು.

ಹಳಗನ್ನಡದಲ್ಲಿದ್ದ ಎಷ್ಟೊ ಮಾತುಗಳು ಈಗ ನಷ್ಟವಾಗಿವೆ. ಕಬ್ಬಿಗರ ಕಾವದಲ್ಲಿ ಕೆಲಸಕ್ಕೆ ಬಿದ್ದ ಪದಗಳಲ್ಲಿ ಸುಮಾರು ೨೫೦ ಈಗಿನ ಗದ್ಯಗ್ರಂಥಗಳಲ್ಲಿ ದುರ್ಲಕ್ಷ್ಯವೆನ್ನಬಹುದು. ಕದಪು, ನಿಟ್ಟಿಸು, ನರುಗುಂಪು, ಇನಿ, ಸೂಳು, ತೀಡು, ಅಲಂಪು, ನೀರು, ಪಾಂಗು, ರಯ್ಯ, ಪೆಂಪು, ಬಿಣ್ಪು ತನಿ, ನಿಡು, ನೆಗಳ್ತೆ, ಸಯ್ಪು, ಕೂರ್ಮೆ, ಕಡುಪು, ತರಿಸಲ್ಲು, ಬಿಸವಂದ -- ಇಂತಹ ಮಾತುಗಳಲ್ಲಿ ದೋಷವೇನಿದೆ? ಸಂಸ್ಕೃತದ ಸಹಾಯವಿಲ್ಲದೆ ಗತಿಯಿಲ್ಲ ವೆಂದು ಒಪ್ಪಿಕೊಳ್ಳಬಹುದು. ಗೀರ್ವಾಣ ಭಾಷೆಯ ಪದಗಳಿಂದ ಶೈಲಿಗೆ ಕಾಂತಿಯೊ ಓಜಸ್ಸೊ ಬೇಕಾದ ಗುಣಗಳು ಪ್ರಾಪ್ತಿಸುತ್ತವೆಂಬುದನ್ನು

ಅನುಮೋದಿಸಬಹುದು. ಆದರೆ ಹಳೆಯ ಮಾತುಗಳೆಲ್ಲವೂ ಹುಳತುಹೋದುವೋ?

ಭಾಷೆಯ ವಿಷಯದಲ್ಲಿ ಕಾಲ ವಿಭಾಗ ಬೇಡ

ಮೊದಲ ಹಳಗನ್ನಡದಲ್ಲಿ ಬರೆದ ಕಾವ್ಯಗಳು ದೊರೆತಿಲ್ಲ. ಈಗಿನ ಹೊಸಗನ್ನಡದಲ್ಲಿ ಕಾವ್ಯಗಳನ್ನು ಬರೆಯುವುದಿಲ್ಲ. ಪೋದಾರ್ – ಕ್ರಿ .ಶ. ೮೧೦ ; ಹೋಹಾನ್ -೯೨೦ ; ನಾಡುಳ್ ೧೦೨೧ ; ದೇವರಿಗೆ -- ೭೮೦; ಇಗೆಲ್ಲ ಪ್ರಯೋಗಗಳ ಕಾಲವು ಅನಿಯತವಾದುದರಿಂದ ಕೃತ, ತ್ರೇತ,ದ್ವಾಪರ ಕಲಿ, ಎಂಬಂತೆ ನಾಲ್ಕು ಯುಗಗಳಿಗೆ ಕಾಲಾವಧಿಯನವನ್ನು ಕಟ್ಟಿ ಹೆಚ್ಚಿನ ಲಾಭವಿಲ್ಲ. ಹನ್ನೆರಡನೆಯ ಶತಮಾನದ ಪ್ರಾರಂಭದಲ್ಲಿ ನಯಸೇನನು ಹೊಸಗನ್ನಡದ ಹೆಸರನ್ನು ಹೇಳಿ ಅದೇ ಶತಮಾನದಲ್ಲಿ ಆ ಭಾಷೆಯಲ್ಲಿ ಗ್ರಂಥಗಳು ಹೇರಳವಾಗಿ ಹುಟ್ಟಿದ್ದರಿಂದ ಅಷ್ಟರವರೆಗೆ ಹಳಗನ್ನಡವು ಪ್ರಬಲಿಸಿತು. ಆಮೇಲೆ ಹೊಸಗನ್ನಡದ ಶಕವು ಪ್ರಾರಂಭಿಸಿತೆಂದು ಸ್ಥೂಲವಾಗಿ ಹೇಳಬಹುದು.

ನುಡಿಯ ಭವಿತವ್ಯ

ತುರುಕರ ಆಳಿಕೆಯಲ್ಲಿ ಹಲವು ಅನ್ಯದೇಶೀಯ ಪದಗಳು ಕನ್ನಡದಲ್ಲಿ ನುಗ್ಗಿದುವು. ಪುರಾಣಗಳಲ್ಲಿ ಮೊದಲು ಪವುಜು, ಆಮೇಲೆ ಸುರಿತಾಳ, ಸುರತ್ರಾಣ ಎಂಬ ವಾಚಕಗಳು ಸೇರಿದುವು. ಈಚಿನ ಆನಂದರಾಮಾಯಣದಲ್ಲಿ ತಜಿವಿಜಿ, ತಹ, ಮಸಲತೆ , ಎಂಬಂತಹ ನುಡಿಗಳೂ ಕಾಣುತ್ತವೆ. ಕಾವ್ಯಗಳಲ್ಲಿ ಆಂಗ್ಲರ ಮಾತುಗಳನ್ನು ಹಾಕಬೇಕೆಂದು ಪುನರ್ವಿಧಾಯಕರು ಈವರೆಗೆ ಪ್ರತಿಪಾದಿಸಿಲ್ಲ. ಛಂದಸ್ಸಿನಲ್ಲಿ ಕವಿಗಳಿಗೆ ಬೇಕಾದಷ್ಟು ಸ್ವತಂತ್ರವನ್ನು ಕೊಡಬೇಕೆಂದು ವಾದಿಸುವವರಿದ್ದಾರೆ. ಗಣನಿಯಮಗಳನ್ನುಲ್ಲಂಘಿಸಿ ಕಂದಪದ್ಯಗಳನ್ನು ಬರೆದ ಸೂರ್ಯಕವಿ ತಿಳಿಗೇಡಿಯಾಗಿರಲಿಲ್ಲ. ಪಾಂಡಿತ್ಯಕ್ಕಿಂತ ಉಪಯೋಗಿತೆಯನ್ನು ಹೆಚ್ಚಾಗಿ ಪ್ರೀತಿಸುವವರು ಪೂರ್ವದಲ್ಲಿಯೂ ಇದ್ದರು. ಈಗಲೂ ಇದ್ದಾರೆ, ಇನ್ನುಮುಂದೆ ಅವರ ಸಂಖ್ಯೆ ಬೆಳೆಯಬೇಕೇ?. ಗದ್ಯದಲ್ಲಿ ಆಂಗ್ಲಭಾಷೆಯ ಅಪಭ್ರಂಶಗಳು ಎಷ್ಟು ಪ್ರವೇಶಿಸುತ್ತವೊ -- ಗುಡ್ನೆಸೇ ಬಲ್ಲುದು.

## ಪರಿಶಿಷ್ಟ

ಈ ಪುಸ್ತಕವು ಅಚ್ಚಾಗುತ್ತಿದ್ದ ಕಾಲಕ್ಕೆ ಆರ್. ತಾತಾಚಾರ್ಯರು ಕ.ಸಾ.ಪ. ಪತ್ರಿಕೆಯ ಜುಲೈ ೧೯೧೯ರ ಸಂಚಿಕೆಯಲ್ಲಿ 'ಕನ್ನಡ ಶಬ್ದದ ವ್ಯುತ್ಪತ್ತಿ' ಯ ಬಗ್ಗೆ ಟಿಪ್ಪಣಿಯೊಂದನ್ನು ಪ್ರಕಟಿಸಿದರು :

"ಕರಿಯ ಮಣ್ಣುಳ್ಳ ದೇಶವೆಂಬ ಅರ್ಥದ ಕರ್ನ್ನಾಡು ಎಂಬ ಪದದಿಂದ 'ಕನ್ನಡ' ಎಂಬ ಹೆಸರು ಬಂದಿದೆಯೆಂದು ಕಿತ್ತಲ್, ಗುಂಡರ್ಟ, ಕಾಲ್ಡವೆಲ್, ಮೊದಲಾದ ಯುರೋಪಿಯನ್ ಪಂಡಿತರು ಹೇಳಿರುವರು.

ಕನ್ನಡಿ ಕನ್ನಡು ಎಂದು ರೂಪಾಂತರಗಳೂ ಕೆಲವೆಡೆಗಳಲ್ಲಿ ಕಾಣಬರುವವು. ಈ ಮೂರು ರೂಪಗಳಲ್ಲಿಯೂ ರೇಫೆ ಕಾಣಿಸುವುದಿಲ್ಲ. ಈ ರೇಫೆಯ ಲೋಪಕ್ಕೆ ಕರ್ನಿಯ್ದಿಲ್ ಎಂಬುದರಿಂದ ಕನ್ನೆಯ್ದಿಲ್ ಎಂದಾದಂತೆ ದೃಷ್ಟಾಂತವನ್ನು ಕಿತ್ತಲರವರು ನಿಘಂಟುವಿನಲ್ಲಿ ಹೇಳಿರುವರು. (ಆದರೆ) ಕರ್ನ್ನಡ ಎಂಬ ರೂಪವನ್ನಾಗಲೀ ಕರ್ನ್ನಾಡೆಂಬ ರೂಪವನ್ನಾಗಲಿ ನಮ್ಮ ದೇಶ ಭಾಷೆ ಎಂಬ ಅರ್ಥದಲ್ಲಿ ಪ್ರಯೋಗಿಸಿರುವಂತೆ ತೋರಲಿಲ್ಲ.

ವಾಸ್ತವವಾಗಿ ಕನ್ನಡದಲ್ಲಿ ಕಪ್ಪು (ಕರ್ಪು) ಇಲ್ಲದುದರಿಂದ ಇಂತಹ ವ್ಯುತ್ಪತ್ತಿಯನ್ನು ಬಿಟ್ಟು ಮತ್ತೊಂದು ವ್ಯುತ್ಪತ್ತಿಯನ್ನು ವಿಚಾರಿಸಿ ನೋಡುವ."

ಇದಕ್ಕೆ ಪ್ರತಿಕ್ರಿಯೆಯಾಗಿ ಹ.ನಾ.ರವರು ಈ ತಮ್ಮ ಪುಸ್ತಕದ ಕೊನೆಯಲ್ಲಿ ಪರಿಶಿಷ್ಟವಾಗಿ ಕರುನಾಡು - ಎತ್ತರದ ನಾಡು ಎಂಬ ವ್ಯುತ್ಪತ್ತಿಯನ್ನು ಈ ರೀತಿ ಮುಂದೆ ಮಾಡಿದ್ದಾರೆ.

-ಸಂಪಾದಕ)

---

ಕ.ಸಾ.ಪ. ಪತ್ರಿಕೆಯಲ್ಲಿ ಕನ್ನಡ ಶಬ್ದದ ವ್ಯುತ್ಪತ್ತಿಯನ್ನು ಕುರಿತು ಶ್ರೀಯುತ ತಾತಾಚಾರ್ಯರು ಬರೆದ ಉಪನ್ಯಾಸವು ಈ ಪುಸ್ತಕವು ಅಚ್ಚಿನಲ್ಲಿರುವಾಗ ನನ್ನ ಕೈಸೇರಿತು. ಹಳೆಯ ತಮಿಳು ಗ್ರಂಥಗಳಲ್ಲಿ ಕರ್ಣಾಟ ದೇಶಕ್ಕೆ ಕರುನಡಂ ಮತ್ತು ಕಂನಡಂ ಎಂಬ ಎರಡು ಹೆಸರುಗಳು ಇವೆ. ಕರುನಡಂ ಎಂದರೆ ಮೇಲ್ನಾಡು. ಅದು ಸಂಸ್ಕೃತ ಶಬ್ದದ ರೂಪಾಂತರವಾಗಿದ್ದರೆ

ವಿವಿಧಾರ್ಥಗಳನ್ನು ಸೂಚಿಸಬಹುದು. ಕನ್ನಡ ಶಬ್ದವು ತದ್ಭವವೆಂಬ ಕೇಶಿರಾಜ, ಭಟ್ಟಾಕಲಂಕರ ಮತವು ತಪ್ಪಾಗಿ, ಮೊದಲಿಂದಲೂ ದೇಶಕ್ಕೂ ಭಾಷೆಗೂ ಕನ್ನಡ ಎಂಬ ಹೆಸರೇ ಇತ್ತಾದರೆ, ಈಚೆಯ ಕವಿಗಳು ಕಮ್ಮಿತಾದ ನಾಡಿಗೆ ಕರ್ಪು ಹೇಗೆ ಸಮನಿಸಿತೊ ಎಂದು ಕೇಳಿರುವುದರಿಂದಲೂ ಭಾಷೆಯನ್ನು ಕನ್ನಡಿಗೆ ಹೋಲಿಸಿರುವುದರಿಂದಲೂ ಕಮ್ಮಿತು ನಡ, ನುಡಿ ಎಂಬುದೇ ನಿಜವಾದ ವ್ಯುತ್ಪತ್ತಿಯಾಗಿರಬಹುದು. ಇದೇ ಆ ಉಪನ್ಯಾಸದ ಸಾರಾಂಶವು. " ಕರ್ಪೆಂತು ನಾಡಿಗೊಗೆದುದೊ " ಎಂಬ ಪ್ರಶ್ನೆಯಿಂದ ತಮ್ಮ ಮತವೇ ಸಮರ್ಥಿತವಾಗುತ್ತದೆಂದು ಗುಂಡರ್ಟ್‌ಸಾಹೇಬರ ಅನುಯಾಯಿಗಳು ತರ್ಕಿಸಿದರೂ ತರ್ಕಿಸಬಹುದು. ಈ ವ್ಯಾಖ್ಯಾನತುಮುಲದಲ್ಲಿ ಕರ್ಣಾಟಕರಿಗೆ ಪ್ರಸ್ಥಾಧಿವಾಸವೇ ಸುರಕ್ಷಿತವೆಂದು ಕಾಣುತ್ತದೆ.

(ಈ ವಿಷಯವಾಗಿ ಇದೇ ವಿಭಾಗದಲ್ಲಿ ಬಂದಿರುವ 'ಕನ್ನರ, ಕನ್ನಡಿ, ಕನ್ನಡ 'ಲೇಖ ನೋಡಿರಿ -ಸಂ)

## ೨ ಕರ್ಣಾಟಕ ಧಾತುಗಳು

ಕೇಶಿರಾಜನು ತನ್ನ ಶಬ್ದಮಣಿದರ್ಪಣದಲ್ಲಿ "ವೇದಸಮನಾಗಿ ಭೀಮನಿನಾದುದು ಸಂಸ್ಕೃತ ಧಾತುವಾತೆರದಿಂದಂ ಯಾದವಕಟ ಕಾಚಾರ್ಯನಿನಾದುದು ಕರ್ಣಾಟಧಾತು " ಎಂದು ಹೊಗಳಿಕೊಂಡಿರುವನು. ಈ ಧಾತು ಪಾಠವನ್ನು ತನ್ನಿಂದಾಗುವ ಮಟ್ಟಿಗೆ ಸಂಪೂರ್ಣವಿರಿಸಲು ಆತನು ಯತ್ನಿಸದಿದ್ದ ಪಕ್ಷದಲ್ಲಿ ಹೀಗೆ ಹೊಗಳಿಕೊಳ್ಳುತಿದ್ದನೇ? ಅಲ್ಲದೇ ಈ ಸಂಗ್ರಹದ ಗಣನೆಯು ಒಂದು ಸಾವಿರಕ್ಕೆ ಸಮಾಪಿಸಿರುವುದರಿಂದ ಅದರಲ್ಲಿ ಕಾಣದಿರುವ ಅವುದಾದರೊಂದು ಧಾತು ಕೇಶವನ ಕಾಲದಲ್ಲಿ ಪ್ರಚಲಿತವಿತ್ತೋ ಎಂಬ ಪ್ರಶ್ನೆಯು ಹುಟ್ಟಲಿಕ್ಕೆ ಆಸ್ಪದವಿರುತ್ತದೆ. ಧಾತುಗಳನ್ನು ಸಿದ್ಧ, ಕೃದಂತ, ತದ್ಧಿತ, ಸಮಸ್ತ ಎಂಬೀ ನಾಲ್ಕು ವಿಧವಾಗಿ ವಿಭಾಗಿಸಿರುವರಷ್ಟೆ. ಕೇಶವನ ಧಾತುಮಾಲೆಯಲ್ಲಿ ಈ ಎಲ್ಲ ಜಾತಿಯ ಶಬ್ದಗಳಿದ್ದರೂ ಸಿದ್ಧಧಾತುಗಳಲ್ಲದೆ ಉಳಿದ ಮೂರು ಜಾತಿಯವುಗಳನ್ನು ಸಮಗ್ರವಾಗಿ ಪುಂಜೀಕರಿಸಿದರೆ ಗ್ರಂಥಕ್ಕೂ ಅತಿಬಾಹುಳ್ಯ ಬರುತ್ತಿತ್ತು. ಗ್ರಂಥಕರ್ತನಿಗೂ ಅನಾವಶ್ಯಕ ಶ್ರಮವಾಗುತ್ತಿತ್ತು.

ದರ್ಪಣದಲ್ಲಿ ಇಸು ಪ್ರತ್ಯಯವನ್ನು ಹಚ್ಚಿ ರಚಿಸಿದ ಧಾತುಗಳೇ ನೂರಕ್ಕೆ ಮಿಕ್ಕಿವೆ. ಇಂತಹ ಶಬ್ದಗಳನ್ನು ನಿಶ್ಶೇಷವಾಗಿ ಏಕತ್ರಗೊಳಿಸುವ ಪ್ರಯತ್ನವನ್ನು ಕೇಶವನಲ್ಲಿ ಆರೋಪಿಸುವುದು ನ್ಯಾಯವಲ್ಲ. ಹಾಗಾದರೆ ಸಿದ್ಧಧಾತುಗಳನ್ನಾದರೂ ಬಿಡದೆ ಆತನು ಎಲ್ಲವನ್ನು ಸಂಗ್ರಹಿಸಿರುವನೇ ? ಇಲ್ಲ. ದರ್ಪಣದ ಇತರ ಭಾಗಗಳಲ್ಲಿ ತೋರ್ಪಡುವ ಹಲವು ಧಾತುಗಳು ಈ ಶಬ್ದಾವಳಿಯಲ್ಲಿ ಬಿಟ್ಟುಹೋಗಿವೆ.

ಕಿರ್ಗು;ತರ್ಗು;ಎತ್ತು (ಎತ್ತಿಸು ಎಂದಿದೆ ); ಆಯ್ದು; ಪಲುಂಬು; ಉಯ್ = ಒಯ್ (ಉಯ್, ನಿಯಾಮೇ ಎಂದಿದೆ); ಸೂಟರ್ ; ಜಾರು ; ಒರೆ=ಹೇಳು (ಒರೆ, ಕರ್ಷಣೇ ಎಂದಿದೆ); ಆಗಲ್;ಒಲ್;ಗೆಲ್; ಚೆಲ್;ಬಲ್;ಉಲಿ;ನಲಿ;

ಸುಲಿ; ನೀವು; ಸೋವು ;ಅಳ್=ಅಧಿಕರಿಸು;ಕೆರಳ್;(ಕೆರಳ್ಚು ಎಂದಿದೆ ); ತೆರಳ್ (ತೆರಳು ಎಂದಿದೆ); ಪೇಳ್ ; ಪೊದಳ್;ಪೊಳ್=ಎಸೆ(ಪೊಳೆ ಲುಠನೆ ಎಂದಿದೆ )-- ಇವೇ ಮೊದಲಾದ ವಾಚಕಗಳು ಮರೆಯತಕ್ಕವುಗಳಲ್ಲವಾದರೂ ಮತ್ತು ದರ್ಪಣದಲ್ಲಿಯೇ ಬೇರೆಲ್ಲೆಲ್ಲ ಸಿಕ್ಕಿದರೂ ಧಾತುಪ್ರಕರಣದಲ್ಲಿ ಲುಪ್ತವಾಗಿದೆ. ಹೀಗಿದ್ದು ಕೇಶವನ ಸಂಗ್ರಹದಲ್ಲಿ ಕಣ್ಣಿಗೆ ಬೀಳದ ಧಾತುಗಳೆಲ್ಲ ಅವನ ಕಾಲದಲ್ಲಿ ಪ್ರಚಲಿತವೇ ಇರಲಿಲ್ಲವೆಂದು ಹೇಳಲಾಗದು.

ಆದರೂ ಅಂತಹ ಅನುಮಾನವು ತೀರ ನಿಷ್ಕಾರಣವೆಂದು ಹೇಳುವದೂ ಸರಿಯಲ್ಲ. ಯಥಾರ್ಥವೇನಿದೆಯೋ ಎಂಬುದನ್ನು ಹುಡುಕಿ ನಿರ್ಣಯಿಸುವುದೇ ಉತ್ತಮ.

ಅದಪ್ರಯುಕ್ತ ಕೇಶವನ ಧಾತುಪಾಠದಲ್ಲಿ ಮಾತ್ರವಲ್ಲ, ದರ್ಪಣದ ಇತರ ಭಾಗಗಳಲ್ಲಿಯೂ ಇಲ್ಲವೆಂದು ಕಿಟ್ಟೆಲ್‌ರ ನಿಘಂಟನಿಂದ ಎಣಿಸಬಹುದಾದ ಕೆಲವು ಸಿದ್ಧಧಾತು ಗಳನ್ನು ಕೆಳಗ ಕಾಣಿಸಿದ್ದೇನೆ :-

ಇಣಿಕು, ಕುಲಕು, ಬೆದಕು, ಹಿಸಕು, ತೋಕು, ಲೊಟಕು(ಕಣ್ಣು)ಕುಕ್ಕು, ಗುಕ್ಕು, ತಿಕ್ಕು, ದಕ್ಕು, ಕೊಂಕು, ಹಾಯ್ಕು;ಚಿಗಿ, ಮುಗಿ =ತೀರು, ಸಿಗಿ (ಸೀಳ್, ವಿದಾರಣೇ) ಎಂದಿದೆ. ಸಿಗುಳ್ ಎಂಬುದರಿಂದ ಸಿಗಿ ಮತ್ತು ಸೀಳ್ ಹುಟ್ಟಿರಬಹುದು), ಹುಗಿ, ಗೊಜಗು, ಗೊಣಗು, (ಇಂತಹ ಸ್ವರಾನುಕಾರಿ ಶಬ್ದಗಳು ಧಾತುಮಾಲೆಯಲ್ಲಿ ಸೇರಿಸಲಿಕ್ಕೆ ಯೋಗ್ಯವಲ್ಲವೆಂದರೂ

ಎನ್ನಬಹುದು) ಜರಗು, ಜಿನುಗು=ಕರಗು, ಜುಣಗು, ನಜುಗು, ನೆಗ್ಗು, ಪೆಣಗು, (ಪೆಳಕು, ಜಗಳಂ ಎಂದಿದೆ ) ಹಣಗು, ಮಾಗು, ರೇಗು, ಸಾಗು, ಸಿಗು, (ಇದು ಉತ್ತರ ಕರ್ಣಾಟಕದ ಮಾತು)ಸಿರ್ಕು, ಸಿಲ್ಕು, ಪ್ರತಿ ಬಂಧೇ ಎಂದಿದೆ. ಪ್ರತಿಬಂಧಕ್ಕೂ ಪ್ರಾಪ್ತಿಗೂ ವಿಶೇಷ ದೂರವಿಲ್ಲ), ಸೊರಗು (ಸುರ್ಕು ಸಂಕೋಚೇ ಎಂದಿದೆ), ಜಗ್ಗು (ಇದು ೩೮ನೆಯ ಸೂತ್ರದಲ್ಲಿ ಉದಾಹರಿಸಿದ ಜರ್ಗುವಿಳ್ದುದು ಎಂಬ ಶಬ್ದದ ಪ್ರಥಮ ಭಾವವಿರಬಹುದು), ಹಿಗ್ಗು, ಇಂಗು, ಮಳ್ಗು, ಚಾಚು, ತೋಚು, (=ತೋರ್ಚು?), ಕೊಚ್ಚು ಚುಚ್ಚು;ಜಜ್ಜು;ಪುಟಿ ನರಟು, ಗಿಟ್ಟು , ಅಂಟು, ಊಂಟು, ಮೀಂಟು,; ದುಡಿ (ಬಾವಿ), ತೋಡು, ದೂಡು, ಗಿಂಡು, ಸುಂಡು, ಕೊಡೆ, ದಣಿ, ಕತ್ತು , ತೊನ್ನು, ತೇ;ಕದಿ (ಕಳ್, ಸ್ತೇಯೇ ಎಂದಿದೆ ), ಏದು, ಅದ್ದು (ಅಗುಳ್,ಜಲನಿಮಜ್ಜನೇ ಎಂದಿದೆ), ಅನ್ನು, ಸೆನ್ನು; ಜನಿ ತಲಪು; ಕದುಬು, ಕಸುಬು, ದೊಬ್ಬು, ರುಬ್ಬು; ಕುಣ್ಮು ಕೊಮೆ; ಹುಯ್ ;ಕವರ್, ತೇರು, ನಿಗುರ್ (ನಿಮಿರ್ ಎಂಬುದರ ರೂಪಾಂತರ ವಿರಬಹುದು), ಕಿಕ್ಕಿ, ತಿರಿ (ತಿರುಪು, ಭ್ರಮಣೇ ಎಂದಿದೆ), ಹಿರಿ, ಅಂಟರು, ಇಮರು, ಎಗರು, ಕಮರು, ಕುದುರು, ಕೊಸರು, ಕೋರು, ತೆವರು, ಹೆರು= ಹೆಪ್ಪಾಗು, ಹೇರು =ಹೊರಿಸು, ಬರೆ (ಬತ್ತು) ಹೆರೆ; ಮೆಲ್, ಕಲೆ (ಕಲಸು ಎಂದಿದೆ ); ಎಡವು, ಕಸಿ, ಸೀ; ರೋಸು (ಕ್ರಯ) ಬಾಳು.

ಹಳಗನ್ನಡದಲ್ಲಾಗಲಿ ಹೊಸಗನ್ನಡದಲ್ಲಾಗಲಿ ಒಂದು ಧಾತುವಿಗೆ ಹಲವು ರೂಪಗಳಿದ್ದು ಅವುಗಳಲ್ಲೊಂದು ಕೇಶವಸ್ಮೃತವಾದರೆ ಇನ್ನೊಂದು ಲುಪ್ತವಾಗಿದೆಯೆಂದು ಈ ಪ್ರಬಂಧದಲ್ಲಿ ತೋರಿಸಿ ಕೊಡುವುದು ಅವಶ್ಯಕವಲ್ಲ. ಉದಾಹರಣೆ- ತೇಂಕು, ತೇಲು; ಕೆದರು, ಚದರು; ಸಮರು, ಸವರು; ನೂಲ್, ನುಲಿ; ನುಗುಳ್ ನುಗ್ಗು- ಇತ್ಯಾದಿ. ಅದಲ್ಲದೆ ಕೇಶವನು ಹೇಳಿದ ಅರ್ಥಕ್ಕೂ ಇತರರ ಪ್ರಯೋಗಕ್ಕೂ ಇರಬಹುದಾದ ತಾರತಮ್ಯವನ್ನು ಕಾಣಿಸುವುದೂ ಪ್ರಕೃತೋಚಿತವಲ್ಲ. ಉದಾ:- ಕಣೆಸೀಂಟಿದುವು ವಿಧಿಲಿಪಿಯಂ, ಎಂದು ಪಂಪರಾಮಾಯಣದಲ್ಲಿದೆ ಸೀಂಟು, ಗುದಸಂಮಾರ್ಜನೇ ಎಂದು ಕೇಶವನು ಹೇಳಿರುವನು !

ದರ್ಪಣದಲ್ಲಿಲ್ಲವೆಂದು ಮೇಲೆ ಕಾಣಿಸಿದ ಧಾತುಗಳಲ್ಲಿ, ತೊಂಕು, ಇಂಗು, ಮಳ್ಗು, ತೇ, ಕಸುಬು, ಕಿಕ್ಕಿರಿ, ಮೆಲ್, ಎಡವು, ಸೀ-ಇವುಗಳಿಗೆ ಪಂಪರಾಮಾಯಣ, ಗಿರಿಜಾಕಲ್ಯಾಣ, ಚಂದ್ರಪ್ರಭ ಪುರಾಣ ಮುಂತಾದ

ಪೂರ್ವಗ್ರಂಥಗಳಿಂದ ಉದಾಹರಣೆಗಳನ್ನು ಕಿಟ್ಟೆಲ್‌ರೇ ಕೊಟ್ಟಿರುವರು. ರಾ। ನರಸಿಂಹಾಚಾರ್ಯರುಗಳ ಕವಿಚರಿತ್ರೆಯಲ್ಲಿ ಉದ್ಧರಿಸಿ ಹಾಕಿದ ಗ್ರಂಥಾಂಶಗಳನ್ನು ಮೇಲೆ ಮೇಲೆ ನೋಡುವಾಗ ಕೇಶವನ ಹಿಂದಿನ ಕವಿಗಳು ಕೆಳಗಿನ ಪದಗಳನ್ನು ಉಪಯೋಗಿಸಿದರೆಂದು ಕಂಡು ಬಂತು :-೧ ಕುಲಕು "ಮಣಿದು ಕುಲಂಕಿ ತೇಂಕಿ " (ಪುಟ. ೩೦೫). ೨. ದಕ್ಕು -"ದಕ್ಕಿದೊಡೆ ಶುದ್ಧ ಹೊಲೆಗಿಕ್ಕಿ ಮಾತಾಡುವರೆ " (ಪುಟ ೧೯೩) ೩.ಚಿಗಿ."ಹಿಮಾಂಶು ಚಿಗಿಯಲ್, (೨೭೩). ೪. ಹಣಗು-"ಕುತ್ತುರೊಳು ಹಣಗಿ "- (೧೮೪); ಇಣಿಕು ಎಂಬುದು ಇದರ ರೂಪಾಂತರವೇ ? ೫. ನೆಗ್ಗು -"ಇಳೆನಳ್ಗಿತೋ" (೨೫೨).೬. ಅಂಟು -"ಅಂಟಿನೆಲೆಗೊಂಡ"(೧೯೯) ೭. ದಣಿ-"ಆಡಿ ಕಾಲು ದಣಿಯದು" (೧೪೪).೮. ಬರೆ-"ಬರತಬಾಯ್ " (೧೮೫).

ಉಳಿದ ಧಾತುಗಳಲ್ಲಿ ಕೆಲವಾದರೂ ಸ್ವಲ್ಪ ಶ್ರಮಪಟ್ಟು ಹುಡುಕಿದರೆ ಪುರಾತನ ಕಾವ್ಯಗಳಲ್ಲಿ ಗೋಚರಿಸಬಹುದು. ಸಮಯಾನುಕೂಲತೆಯಿದ್ದವರೂ ಓದಿ ನೆನಪಿದ್ದವರೂ ಅವುಗಳನ್ನು ತೋರಿಸಿಕೊಟ್ಟರೆ, ಭಾಷಾ ಚರಿತ್ರೆ ವಿಚಾರಕರಿಗೆ ಉಪಕಾರವಾಗುವುದು. ದರ್ಪಣದಲ್ಲಿಯೂ ಕಿಟ್ಟೆಲ್‌ರ ನಿಘಂಟಿನಲ್ಲಿಯೂ ಇಲ್ಲದ ಧಾತುಗಳನ್ನೂ ಕಾಣಿಸಬಹುದು. ದುರ್ಗಸಿಂಹನ ಪಂಚತಂತ್ರದಲ್ಲಿ "ಕಿವಿತೀಂಬೊಡೆ ತುರಿಸುವೊಡಂ"ಎಂದಿದೆ.

ಶುಕ್ರನೀತಿಯಲ್ಲಿ ಆಚಾರ್ಯರೂ ಪಂಡಿತರೂ ಎಂಬ ರಾಜಧಾನಿಯ ಅಧಿಕಾರಿಗಳಿಗೆ ವಿಧಿಸಿದ ಕರ್ತವ್ಯಗಳನ್ನು ಯಾದವ ಕಟಕಾಚಾರ್ಯರು ನಡಿಸುತಿದ್ದರಾದರೆ, ಕೇಶವನಿಗೆ ಶಬ್ದಮಣಿದರ್ಪಣದಂತಹ ವ್ಯಾಕರಣವನ್ನು ಬರೆಯಲು ಅವಕಾಶ ದೊರಕಿದ್ದೇ ಆಶ್ಚರ್ಯವೆನ್ನಬಹುದು. ಅದರಲ್ಲಿರುವ ಕೊರತೆಗಳನ್ನು ಕಂಡು ಹಿಡಿಯುವುದು ಈ ಲೇಖದ ಉದ್ದೇಶವಲ್ಲ. ಕರ್ಣಾಟಕ ಧಾತುಗಳ ಚರಿತ್ರವನ್ನು ಶೋಧಿಸುವರಿಗೆ ಅದು ಎಷ್ಟರ ಮಟ್ಟಿಗೆ ಸಹಾಯಕರವಾಗುವುದು, ಇತರ ಗ್ರಂಥಗಳನ್ನು ಎಷ್ಟರ ಮಟ್ಟಿಗೆ ಶೋಧಿಸಬೇಕಾಗುವುದು, ಎಂದು ವಿಚಾರಿಸುವುದೇ ಇದರ ಮುಖ್ಯ ನಿಮಿತ್ತವು.

ಕ. ಸಾಹಿತ್ಯ ಪರಿಷತ್ಪತ್ರಿಕೆ ೧, ನಂ. ೩ (ಅಕ್ಟೋಬರ್ ೧೯೧೯)

## ೩. ಅಜ್ಞಾತ ತದ್ಭವಗಳು

ಕಿಟ್ಟೆಲವರು ತಮ್ಮ ನಿಘಂಟಿನಲ್ಲಿ ತದ್ಭವ ಮತ್ತು ಅಚ್ಚಗನ್ನಡ ಮಾತುಗಳ ವ್ಯುತ್ಪತ್ತಿಯನ್ನು ತೋರಿಸಲು ಯತ್ನಿಸಿರುವುದು ಶ್ಲಾಘ್ಯವೇ ಸರಿ. ಆದರೆ ಅನೇಕ ತದ್ಭವಗಳ ಸಂಸ್ಕೃತ ರೂಪಗಳನ್ನು ಅವರು ತಿಳಿಯದೆ ಬಿಟ್ಟಿರುವರು;ಮತ್ತು ನಿಜವಾಗಿ ಸಂಸ್ಕೃತದಿಂದ ಹುಟ್ಟಿದ ಪದಗಳನ್ನು ಅಚ್ಚಗನ್ನಡದಲ್ಲಿ ಸೇರಿಸಿರುವರು. ಸಂಸ್ಕೃತ, ಮರಾಠಿ, ತಮಿಳು, ತೆಲುಗು, ಮಲೆಯಾಳಿ ನಿಘಂಟುಗಳನ್ನು ಅವರು ನೋಡಿದರು. ಆದರೆ ಪ್ರಾಕೃತ ವ್ಯಾಕರಣಗಳನ್ನಾಗಲಿ ನಿಘಂಟುಗಳನ್ನಾಗಲಿ ಸಮೀಕ್ಷಿಸಿದರೆಂದು ಕಾಣುವುದಿಲ್ಲ. ಹೀಗಾಗಿ ಅಚ್ಚಗನ್ನಡದ ವೇಷವನ್ನು ಧರಿಸಿದ ಕಳ್ಳನುಡಿಗಳು ಅವರನ್ನು ಮೋಸಗೊಳಿಸಿದುವು. (೧) 'ಒಡ್ಡು' ಎಂಬ ಮಾತು ಸಂಸ್ಕೃತದಿಂದ ಹುಟ್ಟಿರಬಹುದೆಂದು ಯಾರು ತಾನೇ ಊಹಿಸುವರು?ಆದರೆ ಚಿಲ್ಡರ್ಸ್‌ರ ಪಾಲಿನಿಘಂಟಿನಲ್ಲಿ ಇದು 'ಅವಧಾ' ಎಂಬುದರ ಅಪಭ್ರಂಶವೆಂದು ಹೇಳಿ, 'ಜಾಲಂಡ್ಡೇವೆ' ಬಲೆಯೊಡ್ಡು, 'ಸೋತಂಡ್ಡೇವೆ'=ಕಿವಿಯೊಡ್ಡು--ಈ ಉದಾಹರಣೆಗಳನ್ನು ಕೊಟ್ಟಿರುವರು. ಮಗಧ ರಾಷ್ಟ್ರದಲ್ಲಿ ಆಡುತ್ತಿದ್ದ ಪ್ರಾಕೃತದಲ್ಲಿ ದ್ರಾವಿಡ ವಾಚಕವು ಪ್ರವೇಶಿಸುವುದು ಸಾಧ್ಯವೇ?ಬೌದ್ಧರೂ, ಜೈನರೂ, ಇತರ ಪ್ರಾಕೃತಭಾಷೆ ಜನರೂ ದ್ರಾವಿಡರ ಮಧ್ಯದಲ್ಲಿ ಬಂದು ನಿವಾಸಿಸಿದ್ದು ಇತಿಹಾಸದ ಸಂಗತಿ. (೨) 'ಒಪ್ಪು'ಅಂದರೆ ತಾನೇ ಅಂಗೀಕರಿಸುವುದು. 'ಒಪ್ಪಿಸು', ಮತ್ತು ಮರಾಠಿಯ 'ಓಪಣೆ', ಇವುಗಳಿಗೆ ಬೇರೆಯವರ ವಶಕ್ಕೆ ಕೊಡುವುದು ಎಂಬ ಅರ್ಥವು ಹೇಗೆ ಬಂತು? ಈ ಅನುಮಾನವು ಕಿಟ್ಟೆಲರಿಗೆ ತೋಚಿರಬಹುದು. ಆದರೆ ಅದರ ಪರಿಹಾರಕ್ಕೆ ಅವರು ನೋಡಿದ ನಿಘಂಟುಗಳಲ್ಲಿ ಸಾಧನಗಳಿರಲಿಲ್ಲ. ಸಂಸ್ಕೃತ 'ಅರ್ಪಣಂ' ಪ್ರಾಕೃತದಲ್ಲಿ 'ಓಪಣಂ'ಆಗುವುದೆಂದು ಪ್ರಾಕೃತ ವ್ಯಾಕರಣಗಳಿಂದ ತಿಳಿಯಬೇಕು. ಇಂತಹ ಅಜ್ಞಾತ ತದ್ಭವಗಳಿಗೆ ವಾಚಕರ ಕಣ್ಣುಗಳನ್ನು ತೆರೆಯುವುದಕ್ಕಾಗಿ ಈ ನಿಬಂಧದ ಕೆಲವು ದೃಷ್ಟಾಂತಗಳನ್ನು ಪ್ರದರ್ಶಿಸುವೆನು. ಇವುಗಳಲ್ಲಿ ಕೆಲವು ವರರುಚಿ, ಹೇಮಚಂದ್ರ ಇವರ ವ್ಯಾಕರಣಗಳಲ್ಲಿಯೂ, ಇನ್ನೂ ಕೆಲವು ಪಾಲಿ--ಇಂಗ್ಲೀಷ್ ನಿಘಂಟಿನಲ್ಲಿಯೂ ದೊರಕಿದುವು;ಮತ್ತೂ ಕೆಲವು ನನ್ನ ಸ್ವಾನುಮಾನಕ್ಕೆ ಸಿಕ್ಕಿಬಿದ್ದುವೆಂದು ತಿಳಿಯತಕ್ಕುದು.

ಮರಾಠಿಯಲ್ಲಿ ಹಲವು ದ್ರಾವಿಡ ಶಬ್ದಗಳು ನುಗ್ಗಿರುವುವೆಂದು ವಿದ್ವಾಂಸರ ಮತ. ಆದರೆ ಒಂದು ಮಾತು ಮರಾಠಿಯಲ್ಲಿಯೂ ಕನ್ನಡದಲ್ಲಿಯೂ ಕಂಡುಬಂದರೆ, ಅದರ ಮೂಲವನ್ನು ಮೊತ್ತ ಮೊದಲು ಸಂಸ್ಕೃತದಲ್ಲಿ ಹುಡುಕುವುದು ಸಮಂಜಸವೆಂದು ನನ್ನ ಅಭಿಪ್ರಾಯ. ಸಂಸ್ಕೃತವಾಚಕಗಳಿಗೂ ದ್ರಾವಿಡನುಡಿಗಳಿಗೂ ಅಕಸ್ಮಾತ್ತಾಗಿ ಸಾರೂಪ್ಯವಿದ್ದು, ಅವುಗಳಿಗೆ ಮಾತಾಪುತ್ರೀ ಸಂಬಂಧವಿದೆಯೆಂದು ಭ್ರಮಿಸುವುದು ಅಸಾಧ್ಯವಲ್ಲ. 'ಅಂಕೆಯಿಲ್ಲದ ಮಂಗ', ಇಲ್ಲಿ ಸಂಸ್ಕೃತ 'ಅಂಕ' ಶಬ್ದಕ್ಕೆ ಸಂಯಮಾರ್ಥವನ್ನು ಕಲ್ಪಿಸಬೇಕೆಂದರೆ ಸಾಹಸ ಮಾತ್ರವೇ ಆಗಬಹುದು. 'ಅಂಖ್'ಧಾತುವಿಗೆ ಈ ಅರ್ಥವಿರುವುದರಿಂದ, ಅದರಿಂದ ಹುಟ್ಟಿದ ಒಂದು ಶಬ್ದದ ತದ್ಭವವು ಅಂಕೆಯಾಗಿರಬಹುದೆಂದು ಸೂಚಿಸಬಹುದು. 'ಅಂಡೆಯಬಾಯಿ ಕಟ್ಟಬಹುದು' ಎಂಬಲ್ಲಿ ಬಿದುರಿನ ನಳಿಗೆಯ ಬಾಯಿಯನ್ನು ಕಟ್ಟುವುದು ಕಷ್ಟವಲ್ಲದಿರುವುದರಿಂದಲೂ ಪ್ರಾಕೃತಜನ್ಯ ಭಾಷೆಗಳಲ್ಲಿ ಈ ಗಾದೆಯಿರುವಲ್ಲಿ 'ಹಂಡಾ' ಎಂಬ ಸಂಸ್ಕೃತ ವಾಚಕವನ್ನು ಉಪಯೋಗಿಸುವುದರಿಂದಲೂ, ಇದರ ತದ್ಭವ ಅಂಡೆಯಾಗಿರಬೇಕೆಂದು ಅನುಮಾನಿಸಬಹುದು. ದೃಢವಾಗಿ ಸಾಧಿಸುವುದಕ್ಕೆ ಮನುಷ್ಯನು ಸರ್ವಜ್ಞನಲ್ಲವಷ್ಟೆ. ಇಷ್ಟು ಪೂರ್ವಾನುಬೋಧವನ್ನು ನೆನಪಿನಲ್ಲಿಟ್ಟುಕೊಂಡು ವಾಚಕರು ಕೆಳಗಿನ ದೃಷ್ಟಾಂತಗಳನ್ನು ಪರಾಂಬರಿಸಬಹುದು. ಅವುಗಳೆಲ್ಲವೂ ಅಚ್ಚಗನ್ನಡವೆಂದು ಕಿಟ್ಟೆಲವರ ಮತ.

೧. ಅಕ್ಕುಡಿಸು;ಮ-- ಆಖಿಡಣೆ (ಕಿಟ್ಟೆಲರು ಕೊಟ್ಟಿಲ್ಲ) ; ಸಂ--ಆಕೂಣ್, ಅಥವಾ ಆಕುಂಚ್.

೨. ಆಗಳಾಡು;ಮ--ಅಫುಳಣೆ; ಸಂ--ಆಕಲ್.

೩. ಅಡ್ಡ ; ಮ--ಆಡ; ಪ್ರಾ--ಅಡ್ಡ; ಸಂ--ಅರ್ಧ, ಅರ್ಧ್ಯ. ಕನ್ನಡ ದಲ್ಲಿಯೂ ಮರಾಠಿಯಲ್ಲಿಯೂ ಇದೆ. ಸಂಸ್ಕೃತದಲ್ಲಿಲ್ಲದ ಅರ್ಥಗಳು ಬಂದಿವೆ. ಅಡ್ಡ=ಅಪೂರ್ಣ; ಅಪ್ರಧಾನ; ಮಾರ್ಗದ ಅರ್ಧದಲ್ಲಿ ಬರುವ ಅಂತರಾಯ: ಸರಳಗತಿಗೆ ಅರ್ಧದಲ್ಲಿ ಅಂತರಾಯ ಬಂದು ಪರಿಣಮಿಸುವ ತಿರ್ಯಗ್ವರ್ತನ.

೪. ಅಪ್ಪಳಿಸು;ಮ-ಆಪಟಣೆ (ಕಿಟ್ಟೆಲರು ಕೊಟ್ಟಿಲ್ಲ) ; ಸಂ-ಆಸ್ಫಲ್

೫. ಅಂಬಿಗ; ಮ- ಅಂಬೀ, ಸಂ-ಅಂಬುಗ, ಅಥವಾ ಔಡುಪಿಕ
೬. ಅರಿಬು, ಆರ್ಬಟು; ಮ- ಆರೋಳಿ; ಸಂ- ಆರು, ಆರವ
೭. ಅಲ್ಲಾಡು ; ಮ- ಹಾಲಣೆ ; ಸಂ- ಆಲುಡ್
೮. ಆವಿ ; ಮ-ಆವಾ ; ಸಂ-ಆಪಾಕ
೯. ಉಕ್ಕು; ಮ-ಉಕಳಣೆ; ಸಂ-ಉತ್‌ಕ್ವಥ್ ; ಉತ್‌ಕ್ರಮ್
೧೦. ಉಗ್ಗಡಣೆ; ಸಂ-ಉದ್ಘುಷ್ಟಂ
೧೧. ಉಗ್ರಾಣ ; ಸಂ-ಉದ್ಗ್ರಹಸ್ಥಾನ
೧೨. ಉಬ್ಬಸ ;ಸಂ-ಊರ್ಧ್ವ (ಪ್ರಾ-ಉಬ್ಬ) ಶ್ವಾಸ
೧೩. ಉಬ್ಬಳಿಕೆ ; ಸಂ-ಉದ್ವಮನ
೧೪. ಉಬ್ಬು ; ಸಂ-ಉದ್ವೃಹ್
೧೫. ಉಬ್ಬೆ ; ಸಂ-ಉಷ್ಮ
೧೬. ಉರುಳೆ ; ಸಂ-ಉದ್ವೃತ್
೧೭. ಉಲಿ ; ಸಂ- ಉಲ್ಲಪ್
೧೮. ಉಸಿರ್ ; ಪ್ರಾ - ಊಸಸಿರೊ; ಸಂ- ಉಚ್ಛ್ವಾಸ
೧೯. ಒದರು ; ಸಂ-ಉದೀರ್
೨೦. ಒದ್ದೆ ;ಸಂ- ಆರ್ದ್ರ
೨೧. ಒರೆ ; ಪ್ರಾ -ಏರೇತಿ ; ಸಂ-ಈರ್
೨೨. ಒಸರ್ ; ಸಂ-ಆವಸ್ರು
೨೩. ಓಕರಿಸು ; ಸಂ - ಉದ್ಗೃ (ಉದ್ಗಿರಣ)
೨೪. ಓಟೆ ; ಸಂ- ಅವಟ
೨೫. ಓಸರಿಸು ; ಸಂ-ಅಪಸೃ
೨೬. ಓಳಿ ; ಸಂ-ಆಲಿ, ಆವಲಿ
೨೭. ಕನ್ನ ; ಸಂ-ಖನಕ
೨೮. ಕಲಿ ; ಮ-ಕಳಣೆ; ಸಂ-ಕಲ್
೨೯. ಕಲಸು ; ಮ-ಕಾಲವಿಣೆ ; ಸಂ-ಕಲ್

೩೦. ಕಸರು ; ಸಂ-ಕಷಾಯ

೩೧. ಕಾವಿ ; ಸಂ-ಕಾಷಾಯ

೩೨. ಕುಣ್ಟೆ ; ಸಂ-ಕುಣ್ಠ

೩೩. ಕೆರೆ ; ಮ-ಖರಪಣೆ ; ಸಂ-ಖುರ್

೩೪. ಕೋಣೆ ;ಮ-ಖೋಲಿ ; ಸಂ-ಕೋಷ್ಠ

೩೫. ಗಟ್ಟಿ ; ಮ-ಘಟ್ಟ ; ಸಂ-ಘಟ್ಟಿತ; ಗಾಢ

೩೬. ಗಂಡ-ಇದು ಸಮರ್ಥನೆಂಬ ಅರ್ಥದಲ್ಲಿ ಅಚ್ಚಗನ್ನಡ, ವೀರ ಮತ್ತು ಇನ್ನು ಕೆಲವು ಅರ್ಥಗಳಲ್ಲಿ ಕೂಡ ಸಂಸ್ಕೃತವೆಂದು ಕಿಟ್ಟೆಲರ ಅಭಿಪ್ರಾಯ. ಸಮರ್ಥನಿಗೂ ವೀರನಿಗೂ ಎಷ್ಟು ತಾರತಮ್ಯವೋ ಗೊತ್ತಿಲ್ಲ. ಮರಾಠಿಯಲ್ಲಿ 'ಬ್ರಾಹ್ಮಣ ಗಂಡ'ನೆಂದರೆ ಅಪಾಯ ಬ್ರಾಹ್ಮಣನೆಂಬ ಅರ್ಥ. ಇಲ್ಲಿ ಗಂಡ ಶಬ್ದಕ್ಕೆ ವೀರನೆಂಬ ಅರ್ಥವೆಂದು. ಆದರೆ ವಿಪರೀತ ಲಕ್ಷಣೆಯಿಂದ ಅಧಮನೆಂಬ ಅರ್ಥ ಬಂತೆದು ಫರ್ಗುಸನ್, 'ವಿದ್ಯಾಮಂದಿರದ ಪ್ರವಕ್ತ' ರಾಜವಾಡೆಯವರು ಹೇಳಿರುವರು. ಅದು ಹೇಗಿದ್ದರೂ ಇದು ತದ್ಭವವೆನ್ನಕೂಡದು.

೩೭. ಗವಸಣಿ, ಇದು ಸಂ-ಗವಾಕ್ಷನ್ ಎಂಬುದರ ತದ್ಭವವೆಂದು ರಾಜವಾಡೆಯವರ ಅಭಿಪ್ರಾಯ.

೩೮. ಗಾಯ ; ಸಂ-ಘಾತ

೩೯. ಗಾಳಿ ; ದೆವ್ವ ಎಂಬ ಅರ್ಥದಲ್ಲಿ ; ಸಂ-ಗ್ರಾಹಿ

೪೦. ಗಿಡಗ ; ಸಂ -ಗೃಧ್ರ

೪೧. ಗಿಡ್ಡ ; ಸಂ-ಕ್ಷುದ್ರ

೪೨. ಗೊಂಚಲು ; ಸಂ-ಗುಚ್ಛಕ

೪೩. ಗೊಂದಳ ; ಮ-ಗೋಂಧಳ. ಇವು ಒಂದೇ ಶಬ್ದವಲ್ಲವೆಂದು ಕಿಟ್ಟೆಲರು ಅಕ್ಷರ ಭೇದದಿಂದ ತಿಳಿಸಿರುವರು. ಯಾರು ಬಲ್ಲರು?ಮರಾಠಿ ಶಬ್ದವು, ಸಂ-ಗುದ್, ಗೋದತೆ=ಆಡು. ಇದರಿಂದ ಬಂತೆಂದು ರಾಜವಾಡೆಯವರ ಮತ.

೪೪. ಟಗರ ; ಸಂ-ಭಗಲ

೪೫. ಡೊಂಬಿ ; ಸಂ-ಡಿಂಬ

೪೬. ತೀರ್ ; ಈ ದ್ರಾವಿಡ ಧಾತು ಸಂಸ್ಕೃತದಲ್ಲಿ ಸೇರಿದೆ ಎಂದು ಕಿಟ್ಟೆಲರ ವಾದ. ಇದನ್ನು ತೀರಿಸುವರಾರು? ಪ್ರಾಕೃತದಲ್ಲಿ 'ಅಟ್ಟಂತೀರೇತಿ' ಅಂದರೆ ವಿವಾದವನ್ನು ತೀರಿಸುವುದೆಂಬ ಅರ್ಥವಂತೆ.

೪೭. ತೀವು ; ಸಂ-ತೀವ್. ಇದು ಕಿಟ್ಟೆಲರ ಕಣ್ಣಿಗೆ ಬೀಳಲಿಲ್ಲವೋ ಏನೋ.

೪೮. ತೋರ ; ಸಂ-ಸ್ಥೂಲ

೪೯. ದಟ್ಟ ; ಸಂ-ದೃಢ

೫೦. ದಡ್ಡ ; ಪ್ರಾ-ದಡ್ಡ;ಇದು ಸಂದಸ"=ಕತ್ತೆ, ಎಂಬುದರ ತದ್ಭವವೆಂದು ವೈಯಾಕರಣಿಗಳ ಮತ

೫೧. ನರ ; ಪ್ರಾ- ನಹಾರು ; ಇದು ಸಂ-ಸ್ನಾಯು, ಎಂಬುದರ ಅಪಭ್ರಂಶವಂತೆ.

೫೨. ನೇವಳ ; ಸಂ- ನೈಪಥ್ಯ

೫೩. ಪಳ್ಳ ; ಸಂ-ಪಲ್ವಲ. ಪ್ರಾಕೃತಜನ್ಯ ಕೊಂಕಣಿಯಲ್ಲಿ 'ಪೊಂಡ' = ಕನ್ನಡ 'ಹೊಂಡ'. ಈ ಮಾತುಗಳೆಲ್ಲ ಒಂದೇ ಮೂಲದಿಂದ ಹುಟ್ಟಿರಬಹುದು.

೫೪. ಪಾಡಿ ; ಸಂ-ಪಾಟಕ ; ಪದ್ರ

೫೫. ಪುಡಿ ; ಮ- ಪೂಡ ; ಸಂ-ಧಾತು ಪುಂಡ್

೫೬. ಪೆಗ್ಗು ; ಸಂ-ಫಲ್ಗು

೫೭. ಪೆಟ್ಟು ; ಸಂ-ಪ್ರಹೃತ

೫೮. ಪೊಟ್ಟೆ ; ಹೊಟ್ಟೆ ; ಮ-ಪೋಟ ; ಪ್ರಾ - ಪೂಒಟ ;ಸಂ-ಪ್ರಕೋಷ್ಠ, ಇದರ ತದ್ಭವವೆಂದು ವೈಯಾಕರಣಿಗಳ ಮತ. ಕೋಷ್ಠ ಶಬ್ದಕ್ಕೆ ಈ ಅರ್ಥವನ್ನು ಕೊಟ್ಟು, ಪ್ರಕೋಷ್ಠಕ್ಕೆ ಕೆಲವು ನಿಘಂಟುಗಳಲ್ಲಿ ಕೊಡದೆ ಹೋಗಿರುವುದರಿಂದ ಕಾರಣವೇನೋ ಗೊತ್ತಿಲ್ಲ.

೫೯. ಪೊದೆ, ಹೊದೆ ; ಸಂ-ಪರಿಧಾ

೬೦. ಬಳೆ ; ಸಂ-ಬಲ್, ಕಿಟ್ಟೆಲರ ಮತ ಹೇಗಿದ್ದರೂ ಹಳಗನ್ನಡದಲ್ಲಿ ಬಳೆ ಮತ್ತು ಬೆಳೆ-ಇವುಗಳಿಗೆ ಭೇದವಿರುವುದಕ್ಕೆ ಅವು ಬೇರೆ ಬೇರೆ ಮೂಲಗಳಿಂದ ಹುಟ್ಟಿದ್ದೆ ಕಾರಣವಿರಬಹುದು. ನಿಶ್ಚಯವಿಲ್ಲ.

೬೧. ಬೊಬ್ಬೆ ; ಸಂ-ಭಂಭಾ

೬೨. ಮುಕ್ಕಳಿಸು ; ಸಂ-ಮುಖಕ್ಷಲನ

೬೩. ಮಾಳ; ಸಂ-ಮೂಢ

೬೪. ಮೊದ್ದ ; ಸಂ-ಮುಗ್ಧ

೬೫. ಮೊಳೆ ; ಪ್ರಾ-ಮಯಿಳೊ ಸಂ-ಮಯೂಖ

೬೬. ರೊಂಕೆ ; ಸಂ- ರೇಷಣ

೬೭. ಸರಿ ;ಸಂ-ಸೃ

೬೮. ಸರಿಗೆ ;ಮ-ಸಲಗ ಸಂ-ಸಂಲಗ್ನ

೬೯. ಸಾರಣೆ ; ಸಂ-ಸಂಮಾರ್ಜನ

೭೦. ಸಿಂಬಳ ; ಸಂ-ಶ್ಲೇಷ್ಮ ಜಲ

೭೧. ಸೆಂದು; ಸಂ-ಸ್ರಿಧ್

೭೨. ಹಗುರ ; ಸಂ-ಅಗುರು

೭೩. ಹೊರೆ ,ಪೊರೆ ;ಸಂ-ಭಾರ

೭೪. ಹೊಳೆ; ಮ-ವಹಾಳ; ಸಂ-ವಹಾ

೭೫. ನೆಯ ಶಬ್ದವು 'ಕನ್ನಡ'ವಾಗಲಿ; ಇಲ್ಲಿ ಮುಗಿಸಬೇಕು

.

**'ಕನ್ನಡ'**

ಇದರ ವ್ಯುತ್ಪತ್ತಿಯ ವಿಷಯದಲ್ಲಿ ಹಲವು ಮತಗಳಿರುವುದು ವಾಚಕರಿಗೆ ವಿದಿತವಿದೆಯಷ್ಟೇ....ಮನುಸ್ಮೃತಿಯಲ್ಲಿ 'ನಟಶ್ಚಕರಣಶ್ಚ್ಯವ ಸೋದ್ರವಿಡ ವಿವಚ'ಎಂದು ಕೆಲವು ಮಿಶ್ರಜಾತಿಗಳ ಹೆಸರುಗಳು ಹೇಳಿದೆ. ದ್ರವಿಡರೆಂದರೆ ತಮಿಳು ಪ್ರಾಕೃತ ಧಮಿಲ್ಲ ಜನರೆಂತಲೂ ಇವರ ನಾಡಿನ ಉತ್ತರಕ್ಕೆ ಕರಣರೆಂಬವರು ನಿವಾಸಿಸಿದ್ದರೆಂತಲೂ ಅವರ ನಾಡಿಗೆ ಕರಣರಾಷ್ಟ್ರ ಎಂಬ ಹೆಸರು ಬಂತೆಂತಲೂ ಮಹಾರಾಷ್ಟ್ರವು ಮರಾಠದೇಶ ಎಂದು ಹೇಳುವಂತೆ ಕರಣ ರಾಷ್ಟ್ರವು ಕರಣಾಟ ಆಯಿತೆಂದು ಒಂದು ಮತವಿದೆ. ಆದರೆ ಮನಸ್ಮೃತಿಯ ಕರಣ ಶಬ್ದಕ್ಕೆ ಬೇರೆ ಅರ್ಥವನ್ನು ಹಚ್ಚಿರುವದರಿಂದಲೂ ಕರಣರೆಂಬವರು ಕೃಷ್ಣಾ ತುಂಗಭದ್ರಾ ನದಿಗಳ ಪ್ರದೇಶದಲ್ಲಿದ್ದರೆಂಬುದಕ್ಕೆ ಬೇರೆ ಪ್ರಮಾಣವೇನೂ ಸಿಕ್ಕದಿರುವುದರಿಂದಲೂ ಈ ಮತವನ್ನು ಸ್ವೀಕರಿಸಲು ನನಗೆ ಧೈರ್ಯ ಸಾಲದು. ಕರಹಾಟ ಎಂಬ ಹೆಸರು ಹೇಗೆ ಬಂದಿತೊ ಗೊತ್ತಿಲ್ಲ.

ಮಹಾರಾಷ್ಟ್ರ ನಿವಾಸಿಗಳಿಗೂ ಕುಂತಳ ನಿವಾಸಿಗಳಿಗೂ ಅನ್ಯೋನ್ಯ ಸಂಪರ್ಕದಿಂದ ಪ್ರಾಕೃತದಿಂದಲೂ ಸಂಸ್ಕೃತದಿಂದಲೂ ಈ ಪ್ರದೇಶದ ದ್ರಾವಿಡ ಭಾಷೆಯ ಅನೇಕ ಮಾತುಗಳನ್ನು ಅಂಗೀಕರಿಸಿದ್ದರಿಂದ ಮಹಾರಾಷ್ಟ್ರ ವೆಂಬುದಕ್ಕೆ ಸಮಾನಾರ್ಥವುಳ್ಳ ' ಕರುನಾಡು ' ಎಂಬ ಹೆಸರನ್ನು ಕಲ್ಪಿಸಿ ಕೊಂಡರೋ ಎಂಬ ಅನುಮಾನ ನನ್ನಲ್ಲಿ ಹುಟ್ಟಿ ಚಿರಕಾಲವಾಯಿತು. ತಥ್ಯ ವೇನಿದೆಯೊ ಯಾರು ಬಲ್ಲರು ?

ಪರಿಶಿಷ್ಟ :- ಈ ನಿಬಂಧದ ಉದ್ದೇಶವು ತದ್ಭವ ವಿಚಾರದಲ್ಲಿ ಕುತೂಹಲವನ್ನು ಹೆಚ್ಚಿಸುವುದೇ ಅಲ್ಲದೆ ಆವುದೊಂದು ವಿಷಯದಲ್ಲಿಯೂ ಸ್ವಮತವನ್ನು ಪ್ರತಿಪಾದಿಸುವುದಲ್ಲ. ಹೀಗಿದ್ದು ನನಗೆ ತೋಚಿದ ವ್ಯಾಖ್ಯೆಗಳ ಪೂರ್ವಪರ ಪಕ್ಷಗಳನ್ನು ಮಂಡಿಸದೆ ಕೆಲವು ಸೂಚನೆಗಳನ್ನು ಮಾತ್ರ ವಾಚಕರ ಮುಂದಿಟ್ಟಿರುವೆನು. ಹೇಗೆಂದರೆ ಅಡ್ಡ ಇದರ ರೂಪಾಂತರ ಮರಾಠಿ 'ಆಡ' ಶಬ್ದವು ಗುಜರಾಥಿಯಲ್ಲಿಯೂ ಇರುವುದು. ಇದು ಸಂಸ್ಕೃತ 'ಅಡ್ ಧಾತುವಿನಿಂದ ಬಂದಿರಬೇಕೆಂದು 'ವ್ಯುತ್ಪತ್ತಿ ಪ್ರಕಾಶ' ವೆಂಬ ಚಿಕ್ಕ ಪುಸ್ತಕದಲ್ಲಿಹೇಳಿದೆ. 'ಅಡ್, ಅಭಿಯೋಗೇ' ಶಬ್ದಕಲ್ಪದ್ರುಮ ಅಡ್ಡ, ಅಡಕು, ಅಡಕಾವ ಅಡಚಣೆ ಮುಂತಾಗಿ ಮರಾಠಿಯಲ್ಲಿಯೂ ಗುಜರಾಥಿಯಲ್ಲಿಯೂ ಸ್ವಲ್ಪ ಸ್ವಲ್ಪ ಅಕ್ಷರಭೇದದಿಂದ ಹಲವು ಮಾತುಗಳು ಈ ಧಾತುವಿನಿಂದ ಹುಟ್ಟಿರಬಹುದು. ಇನ್ನೊಂದು ದೃಷ್ಟಾಂತ - ನೇವಳ, ದೇಶೀರತ್ನಾವಳಿಯಲ್ಲಿ 'ಣಿ ಉರಮ್ಮಿಣಿ ಅಲಂ' ಎಂದಿದ್ದು ಇದರ ಅರ್ಥವು 'ಣಿ ಅಲಂನೂಪುರಂ' ಎಂದು ವೃತ್ತಿಯಲ್ಲಿ ಹೇಳಿದೆ ಣಿ ಉರವು ನೇವುರವಾಯಿತು. ಣಿ ಅಲವು ನೇವಳವಾಗಿ ಅದರ ಅರ್ಥವು ದೇಶಾಂತರದಲ್ಲಿ ಬದಲಾಗಿರಬಹುದು. ಅಲ್ಲದಿದ್ದರೆ ನಿವೀತಮಾಲಾ ನಿವೀತವಲಯ ಇಂತಹ ನಾಮಗಳಿಂದ ನೇವಳವು ಹುಟ್ಟಿರಲೂ ಬಹುದು. ಪಂಡಿತರು ನಿರ್ಧರಿಸಲಿ.

ಕ. ಸಾಹಿತ್ಯ ಪರಿಷತ್ಪತ್ರಿಕೆ ೨ ಏಪ್ರಿಲ್ ೧೯೧೭ ಪು ೬೬-೭೧

## ೪. ಕರ್ಣಾಟಕ ಪದಗಳು ಮತ್ತು ದೇಶೀಯ ಪದಗಳು

ಪ್ರಾಕೃತದಲ್ಲಿ ತತ್ಸಮ, ತದ್ಭವ ದೇಶೀ ಈ ಮೂರು ಜಾತಿಯ ನಾಮಗಳಿದ್ದುವು. ಕನ್ನಡದಲ್ಲಿಯೂ ಈ ವರ್ಗಭೇದವನ್ನು ಇಟ್ಟುಕೊಂಡಿರುವೆವು. ಪ್ರಾಕೃತದ ದೇಶೀಯ ನಾಮಗಳನ್ನು ಸಂಗ್ರಹಿಸಿ ಹೇಮಚಂದ್ರನು ಹದಿನೆರಡನೆಯ ಶತಮಾನದಲ್ಲಿ ಬರೆದ ನಿಘಂಟನ್ನೂ ಅದರ ವೃತ್ತಿಯನ್ನೂ ವಿಲಾಯತಿಯ ಪಂಡಿತರು ಪರಿಷ್ಕರಿಸಿ ಮುದ್ರಿಸಿರುವರು. ಈ ನಾಮಗಳಲ್ಲಿ ಕೆಲವು ಸಂಸ್ಕೃತದಿಂದಲೇ ಹುಟ್ಟಿದುವೆಂಬುದಕ್ಕೆ ಸಂದೇಹವಿಲ್ಲ. ಉಳಿದವುಗಳು ಆವ ಭಾಷೆಯಿಂದ ಬಂದುವೆಂದು ಈವರೆಗೆ ಆರೂ ಹೇಳಿಲ್ಲ. ಅವು ಸಂಸ್ಕೃತೇತರ ಭಾಷೆಗಳನ್ನಾಡುತ್ತಿದ್ದ ಮೂಲ ನಿವಾಸಿಗಳು ತಾವು ಕಲಿತ ಪ್ರಾಕೃತದಲ್ಲಿ ಇಟ್ಟುಕೊಂಡ ಮಾತುಗಳೆಂದು ಹೇಳಬಹುದು. ಆ ಜನರಾರೋ ಅವರ ಭಾಷೆ ಯಾವುದಿತ್ತೋ ಗೊತ್ತಿಲ್ಲ. ಬಿಲ್ಲರ ಮಾತಿನ ಮಾದರಿಗಳನ್ನು ಗ್ರಿಅರ್ಸನ್ ಪಂಡಿತರು ಪ್ರಕಟಿಸಿರುವರು. ಅವುಗಳನ್ನು ಪರೀಕ್ಷಿಸಿದರೆ ಈ ಜನರು ತಮ್ಮ ಮೂಲ ಭಾಷೆಯೊಂದಿದ್ದರೆ ಅದನ್ನು ಮರೆತುಬಿಟ್ಟು ಈಗಿನ ಮರಾಠಿ ಗುಜರಾಥಿ ಭಾಷೆಗಳನ್ನು ಕಲಿಯಲಿಕ್ಕೆ ಪ್ರಯತ್ನಿಸಿದ್ದು ಕಾಣುವುದು. ಅದು ಹೇಗಿದ್ದರೂ, ಈ ನಾಮಾವಲಿಯಲ್ಲಿ ಕನ್ನಡ ಮಾತುಗಳು ಸಿಕ್ಕುತ್ತವೆಯೋ ಎಂಬುದನ್ನು ಶೋಧಿಸಿ ನೋಡುವುದು ಕನ್ನಡಿಗರ ಕರ್ತವ್ಯ. ನಾನು ಗುರುತು ಹಿಡಿದ ಕೆಲವು ಪದಗಳನ್ನು ಈ ನಿಂಬಂಧದಲ್ಲಿ ಎತ್ತಿ ಹಾಕುವೆನು. ಅವೆಲ್ಲವೂ ಅಚ್ಚಗನ್ನಡವಲ್ಲ. ಆದರೂ ಪ್ರಾಕೃತ ವ್ಯಾಕರಣಕರ್ತರು ಅವುಗಳಿಗೆ ದೇಶೀಯ ಎನ್ನುವರು. ಈ ನುಡಿಗಳನ್ನು ಉದಾಹರಿಸಿದ ಮೇಲೆ ಅವುಗಳಿಂದ ಹುಟ್ಟುವ ವಿಚಾರಗಳನ್ನು ಚರ್ಚಿಸಬಹುದು. ಕೆಳಗೆ ಹೇಮಚಂದ್ರನ ಪ್ರಾಕೃತ ವಾಕ್ಯಗಳನ್ನೂ ವೃತ್ತಿಕಾರನ ಸಂಸ್ಕೃತ ವಾಕ್ಯಗಳನ್ನೂ ಉದ್ಧರಿಸಿ ಹಾಕಿದೆ.

೧. ಅಕ್ಕ -'ಅಕ್ಕಾಬಹಿಣೀ 'ಸಂಸ್ಕೃತದಲ್ಲಿ ಈ ಪದದ ಅರ್ಥ ತಾಯಿ. ದೇಶೀಯದಲ್ಲಿ ಭಗಿನೀ. ಆದ ಕಾರಣ ಅದನ್ನು ದೇಶೀಯನಾಮಗಳಲ್ಲಿ ಸೇರಿಸಬಹುದು.

೨. ಅಡೆ - 'ಅಯಿಣಂಗಿರಿತಟಂ'. ಇದಕ್ಕೆ ಜಲಪ್ರತಿಬನ್ಧನವೆಂದು ಒಂದು

ಅರ್ಥವಿರಬಹುದು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇದಕ್ಕೆ ದಿನ್ನೆ ಎಂಬ ಅರ್ಥವಿದೆ. ಇದು 'ಅವನಯನಂ' ಶಬ್ದವಾಗಲಾರದೇ.

೩. ಅದಲು-ಬದಲು -'ಉತ್ಥಲ್ಲ ಪತ್ಥಲ್ಲಾ ಪಾರ್ಶ್ವದ್ವಯೇನ ಪರಿವರ್ತನಂ, ಇಲ್ಲಿ ಎರಡನೆಯ ಮಾತು ' ಪ್ರತಿಫಲ 'ದಿಂದ ಹುಟ್ಟಿರಬಹುದು. ಅದಕ್ಕೆ ದ್ವಿರುಕ್ತಿಯಾಗಿ ಉತ್ಥಲವನ್ನು ಹಿಂದಕ್ಕೆ ಸೇರಿಸಿದರೋ ಏನೋ

೪. ಅಪ್ಪ -'ಅಪ್ಪೋಽಪಿತಾ ' ಸಂಸ್ಕೃತ ಅಂಬಃ

೫. ಅಮ್ಮ, ಅವ್ವ -'ಅವ್ವಾ ಅಮ್ಮಾಯ ಅಂಬಾ ,ಎ, ಸಂ-ಅಂಬಾ

೬. ಅಸಲಿ -'ಅಚ್ಚೊಲ್ಲಿ ಅಕ್ರೋಡಾ ಭರಣಂ 'ಇದನ್ನು ಆಯ್ದೆತನದ ಚಿಹ್ನವಾಗಿ ಧರಿಸಿಕೊಳ್ಳುವುದರಿಂದ ಈ ಮಾತು 'ಆಯಃಶಾಲಿ ' ಯ ತದ್ಭವವೆಂದು ನನ್ನ ಎಣಿಕೆ. ಅಯಃ =ಸೌಭಾಗ್ಯ 'ಅಯಿರಾಣೀ ಸೌಭಾಗಾಥಂ ವೃತಾ ಸೇವಿನೀ (ವೃತ್ತಿ),

೭. ಆಡು-'ಅಕೋಡೋಛಾಗಃ 'ಸಂ-ಏಡಕಃ

೮. ಆರಂಬ -ಆರಂಬಿಓ ಮಾಲಾಕಾರ: ಸುಂ-ಆರಾಮಿಕಃ -ಆರಂಬಗಾರನು ಮೊದಲು ತೋಟಗಾರನಾಗಿದ್ದು ಆಮೇಲೆ ಸಾಧಾರಣವಾಗಿ ಕೃಷಿ ಜೀವಿಯಾದನೇನು ? ಇಲ್ಲದಿದ್ದರೆ 'ಆರಂಬ' ಶಬ್ದದ ಮೂಲವು ಬೇರೆಯೇ ಇರಬಹುದು.

೯. ಆರೋಗಣ-'ಅರೋಗಿ ಅಂ ಭುಕ್ತಂ ' ಸಂ-ಆಹರಣ

೧೦. ಉಂಡೆ ಉಂಡಲೋನಿಕರಃ' ಸಂ-ಧಾತು ಊರ್ಣಿ?

೧೧. ಉದ್ದು-'ಉಡಿದೋಮಾಸಮ್ಮಿ'ಊರ್ಜದಃ ? ಇದು ಉಂಡೆಯಂತೆಯೇ ಶುದ್ಧ ದೇಶೀಯನಾಮವೇ ಇರಬಹುದು.

೧೨. ಉಬ್ಬರ- ಉಬ್ಬರೋ ಅಧಿಕಾರ್ಥಃ'--'ಉವ್ವರಂ ಅಧಿಕಂ' ಉರ್ವರಿತ ಉಬ್ಬಟೆ-'ಉಬ್ಬಡ' ಉದ್ಭಟ ?

೧೩. ಉಮ್ಮತ್ತ-'ಉಮ್ಮತ್ತೋಧತ್ತೂರೇ'ಸಂ-ಉನ್ಮತ್ತ.

೧೪. ಉರಳಿ-'ಉಕ್ಖಲೀ ಪಿಠರಂ' ಸಂ-ಉಖಾ. ಉರುಟು ವೃತ್ತ, ಆಕಾರದ ದೆಸೆಯಿಂದ ರಕಾರ ಬಂದಿರಬಹುದು

೧೫. ಊರು-'ಗ್ರಾಮೇ ಸಂಘೇ ಊರೋ' ಪುರ ಶಬ್ದವು ಪೃ ಧಾತುವಿನಿಂದ ಬಂತಂತೆ. ಇದಕ್ಕೂ ಊರು ಧಾತುವಿಗೂ ಅರ್ಥದಲ್ಲಿ ಸಾದೃಶ್ಯವಿದೆ. ಆದರೂ ಇದು ಶುದ್ಧ ದೇಶೀಯಾಗಿರಬಹುದು

೧೬. ಒಕ್ಕಣಿಕೆ-'ಉಕ್ಕಣಿಅಂ, ಕಂಡಿತಂ' ಸಂ -ಅವಕ್ಷೇಪಣ?

೧೭. ಒಪ್ಪ-'ವಿಮಲಣೇ ಒಪ್ಪಾ - ಶಾಣಾದಿನಾಮಣ್ಯಾದೇರ್ಮಾರ್ಜನಂ'ಸಂ -ಉಪಸ್ಕರಣಂ?

೧೮. ಓಕರಿಕೆ -'ಓಕಿಅಂ, ವಾಂತಂ ' ಇದು ಅನುಕರಣ ವಾಚಕವಾದುದರಿಂದ ಆವ ಭಾಷೆಯಲ್ಲಿಯೂ ಇರಬಹುದು.

೧೯. ಓಳಿ -'ಓಲೀಕುಲಪರಿಪಾಟೀ,ಪಙ್ತಿವಾಚಕಸ್ತ್ವಾಲೀ ಶಬ್ದಭವಃ'

೨೦. ಕಟಕ --'ಖಟ್ಟಿಕ್ಕೋ ಸೌನಿಕಃ' ಹದಿನೆರಡನೆಯ ಶತಮಾನದಲ್ಲಿ ಈ ಶಬ್ದವು ದೇಶೀಯ ಎನ್ನಲಿಕ್ಕೆ ಆವ ಕಾರಣವಿದ್ದರೂ ಈಗ ಅದು ಸಂಸ್ಕೃತ ನಿಘಂಟಗಳಲ್ಲಿ ಸಿಕ್ಕುತ್ತದೆ.

೨೧. ಕಠಾರಿ--'ಕಟ್ಟಾರೀಪುರಿಕಾ.ಸಂ-ಕಟ್ಟಾರಃ

೨೨. ಕಡಿತಲೆ --'ಕಡತಲಾವಕ್ರಮೇಕಧಾರಂ ಲೋಹಾಯುಧಂ'. ಈ ಮಾತು ಅಚ್ಚಕನ್ನಡವೇ. ಮತ್ತು ತಲೆಕಡಿಯುವ ಆಯುಧವೆಂದು ದೇಶೀಯರತ್ನಾವಲಿಯ ವೃತ್ತಿಕಾರನು ಎಣಿಸಿದ್ದೂ ಸಹಜವೇ. ಆದರೆ ನಾಚಿರಾಜೀಯದಲ್ಲಿ ಇದಕ್ಕೆ ಚರ್ಮದ ಫಲಕವೆಂದು ಅರ್ಥ ಹೇಳಿದ್ದಕ್ಕೂ ಅದೇ ಅರ್ಥದಲ್ಲಿ ಕವಿಗಳು ಪ್ರಯೋಗಿಸಿದ್ದಕ್ಕೂ ಕಾರಣವೇನು ? ಕಿಟ್ಟೆಲವರ ನಿಘಂಟನ್ನು ನೋಡುವುದು. ಆಪಟೆಯವರ ನಿಘಂಟಿನಲ್ಲಿಯೂ ಕಡಿತುಲಃ ಎಂಬುದಕ್ಕೆ ಖಡ್ಗ ಎಂಬ ಅರ್ಥವನ್ನು ಹೇಳಿದೆ. ಇದು ಶುದ್ಧ ಸಂಸ್ಕೃತವಾಗಲಿ ಇಲ್ಲದಿರಲಿ ನಾಚಿರಾಜೀಯದ ಮಾತು ಬೇರೆಯಾಗಿಬಹುದು.

೨೩. ಕಡ್ಡ--'ಖಡ್ಡಾ ಖಾನಿಃ' ಸಂ-ಖಾತ

೨೪. ಕಡ್ಡ--'ಕಡ್ಡಿ ಓಮತ್ರ: ಸಂ-ಕಡ್ ಧಾತು

೨೫. ಕನಸು --' ಕನವಸ ಇಸ್ವಪಿತಿ ' ಸಂ- ಕಣ್ ಧಾತುವಿಗೆ ಕಣ್ಣುಮುಚ್ಚು ಎಂಬ ಅರ್ಥವಿದೆಯಂತೆ (ಆಪಟೆ)

೨೬. ಕರಡ--'ಕರಇಲ್ಲೀ ಶುಷ್ಕವೃಕ್ಷ:' ಈ ಕರ್ಣಾಟಕ ಮತ್ತು ದೇಶೀಯ ನಾಮಗಳಲ್ಲಿ ಕರ ಶಬ್ದಕ್ಕೆ ಕರಗಿದ, ಶುಷ್ಕ ಈ ಅರ್ಥವಿರಬಹುದು. 'ಇಲ್ಲಿ' ಎಂದರೇನೋ. 'ಇಲ್ಲೀ ಶಾರ್ದೂಲ: ಸಿಂಹೋವರ್ಷತ್ರಾಣಂ' ಹೀಗೆ ನಾನಾರ್ಥಗಳನ್ನು ಇನ್ನೊಂದು ಕಡೆಯಲ್ಲಿ ಹೇಳಿದೆ. 'ಇಲ್ಲೋದರಿದ್ರ: ಕೋಮಲ: ಪ್ರತೀಹಾರೋ ಲವಿತ್ರಂ ಕೃಷ್ಣವರ್ಣಶ್ಚೇತಿ' ಇವು ಇಲ್ಲ ಶಬ್ದದ ಅರ್ಥಗಳಂತೆ. ಇಲ್ಲದತನ ಎಂದರೆ ಬಡತನವೆನ್ನಬಹುದು ಆದರೆ ಬೇರೆ ಅರ್ಥಗಳು ಕನ್ನಡದಲ್ಲಿಲ್ಲದಿರುವುದರಿಂದ ಇದು ಅವ ಭಾಷೆಯ ಮಾತೋ.

೨೭. ಕರಗ--'ಕರಿ ಆ ಮಧ್ಯಪರಿವೇಷಣ ಭಾಂಡಂ ' ಸಂ- ಕರಕ. ಅರ್ಥದಲ್ಲಿ ಭ್ರಷ್ಟತೆ .

೨೮. ಕುಳ್ಳು -- 'ಕಲ್ಲಾಮಜ್ಜೇ' ಸಂ-ಕಲ್ಯಂ ಕಿಟ್ಟೆಲವರು ಇದನ್ನು ಅಚ್ಚಗನ್ನಡದಲ್ಲಿ ಏಕೆ ಸೇರಿಸಿದರೋ

೨೯. ಕಳವು --'ಕಲಮೋತಥಾ ಕುಸುಮಾಲೋ ಚೌರ: ; ಕಲಮಶಬ್ದ: ಸಂಸ್ಕೃತಸಮೋಪಿ ಕವೀನಾಂ ನಾತಿ ಪ್ರಸಿದ್ಧ ಇತಿನಿಬ್ಧ: ಸಂ--ಕಲ್ =ಅಪಹರಿಸು (ಆಪಟೆ)- ಕಳವು ಅಚ್ಚಗನ್ನಡವಲ್ಲವೆನ್ನಬಹುದು. ಇಲ್ಲದಿದ್ದರೆ ದ್ರಾವಿಡ ಮಾತು ಸಂಸ್ಕೃತದಲ್ಲಿ ಸೇರಿರಬೇಕು 'ಕುಸುಮಾಲೋ' -- ಇಲ್ಲಿ 'ಕಸುಕೊಳ್ಳು' ಎಂಬುದರ ತಲೆತೋರುತ್ತದೇನು?

೩೦. ಕಾವಲಿ-'ಕಾಹಲೀ ಅಪೂಪಾದಿ ಪಚನಭಾಂಡಂ' ಸಂ -ಖಲ್ಲಿಕಾ

೩೧. ಕಾಹುರ -'ಕಾಹಲೋ ಕಾತರ ವಾಚೀತ ಕಾತರ ಶಬ್ದಭವ '

೩೨. ಕಿಟಕಿ-' ಖಡ್ಡಕ್ಕೀಲಘುದ್ವಾರಂ' ಸಂ ಖಡಕ್ಕಿಕಾ.

೩೩. ಕುಂಚಿ --'ಕಂಠಕುಂಚೀ ವಸ್ತ್ರಾದಿನಾಂ ಕಂಠೇ ನಿಬದ್ಧೋ ಗ್ರಂಥಿ:' ಸಂ-ಕುಂಚ್ ಧಾತು.

೩೪. ಕುತ್ತರಿ-- 'ಕೊತ್ಥಲೋಕುಶೂಲಃ'-- ಇದು ಕುಶೂಲದ ತದ್ಭವ ವೆಂದರೇನು.?

೩೫. ಕುಂದು-- 'ಕುಂದಕೃಶಃ' ಓಸಂ-ಕುಂಚ್

೩೬. ಕುರುಳು --' ಕುರುಲೋಕುಟಿಲಕೇಶೇ' ಈಗಿನ ಸಂಸ್ಕೃತ ನಿಘಂಟುಗಳಲ್ಲಿ ಇದನ್ನು ಹಾಕಿರುವ ದೇಶೀಯ ಎನ್ನಲು ಕಾರಣವೇನೊ.

೩೭. ಕೂಳು--'ಕೂರಂಭಕ್ತಮಿತಿ ಸಂಸ್ಕೃತ ಸಮ'

೩೮. ಕೊರಲು --'ಕೋಲೋಗ್ರೀವಾ' ಕನ್ನಡದಲ್ಲಿಯೂ ಕೊಳ್ ಎಂಬುದಾಗಿ ಉಚ್ಚರಿಸುವುದುಂಟು (ಕಿಟ್ಟೆಲ್).

೩೯. ಕೊಮ್ಮೆ --'ತೃಣಾದಿಮಯಂವೃಷ್ಟಿ ನಿವಾರಣಂಖುಂಪಾ'.

೪೦. ಕೊಳ್ಳಿ --'ಕೋಣೋಲಕುಟಃ' ಸಂ--ಕೂಲಿತ.

೪೧. ಕೋಟೆ --'ಕೊಟ್ಟಂನಗರಂ'ಸಂ-ಕೋಟಃ.

೪೨. ಕೋಡು --'ಕುಡಂ ಆಶ್ಚರ್ಯಂ ಕೇಚಿತ್ ಕೊಡ್ಡಂ ಇತ್ಯಾಹುಃ ಸಂ ಕಾತುಕಂ ( ಡಾಕ್ಟರ ಭಾಂಡಾರಕಾರವರ ವ್ಯಾಖ್ಯಾನಗಳಲ್ಲಿ ಮಾಡಿದ ಸೂಚನೆ)

೪೩. ಕೋಣೆ --'ಕೋಣ್ಣೋಗೃಹಕೋಣಃ'-- ಮನೆಯ ಮೂಲೆ ಎಂಬ ಅರ್ಥವಾಯಿತು. ಚೈತ್ರದ ಸಂಚಿಕೆಯಲ್ಲಿ* ಕೊಠಡಿ' ಗೆ ಸಂ-ಕೋಷ್ಠ ಎಂದು ಬರೆಯುವುದರ ಬದಲಾಗಿ ಅಜಾಗರೂಕತೆಯಿಂದ ಕೋಣೆಗೆ ಅದನ್ನು ಸಮೀಕರಿಸಿದೆ.

---

*ಪರಿಷತ್ಪತ್ರಿಕೆಯಲ್ಲಿ ಪ್ರಕಟವಾದ 'ಅಜ್ಞಾತ ತದ್ಭವಗಳು' ಎಂಬ ಲೇಖನ. ಈ ಪಾಟಿಕೆಯಲ್ಲಿಯ ಪುಟ. ೭೭ರಲ್ಲಿದೆ --ಸಂ.

೪೪. ಖಾಲಿ --'ಖಲಿಅಲಿಅಂರಿಕ್ತಂ'ಸಂ--ಸ್ಖಲಿತ? ಇದು ಆರಬಿ ಮಾತೆಂದು ಕೆಲವರನ್ನುವರು. ಹೇಮಚಂದ್ರನು ಅನ್ಯದೇಶೀಯ ಶಬ್ದವನ್ನು ದೇಶೀ ಯೆಂದು ಹದಿನೆರಡನೆಯ ಶತಮಾನದಲ್ಲಿ ಭ್ರಮಿಸುವುದು ಅಸಾಧ್ಯ.

೪೫. ಗಡ್ಡ--'ಖಡ್ಡಂಮಂಸು=ಶ್ಮಶ್ರು ಮೀಸೆ. ಸಂ-ಕೂರ್ಚ

೪೬. ಗಂಡ-'ಗಂಡೋದಾಣ್ಡಪಾಶಿಕಃ ;ತಲಾರ' ಮೂರುರಾಯಗಂಡ. ಭಾಷೆಗೆ ತಪ್ಪುವರ ಗಂಡ, ಇತ್ಯಾದಿ ಬಿರುದುಗಳನ್ನು ಹಾಕಿಕೊಳ್ಳುವುದಕ್ಕೆ ಈ ಅರ್ಥವೇ ಕಾರಣವಾಗಿರಬಹುದು.

೪೭. ಗವುಡ--' ಗಾಮ ಉಡೋಗಾಮಗೋಹೋ ಗ್ರಾಮಪ್ರಧಾನಾರ್ಥಾಃ'

೪೮. ಗಾಡಿ--'ಗಡ್ಡೀ ಗಂತ್ರಿ' ತದ್ಭವವಾಯಿತು.

೪೯. ಗಿಣಿ-'ಕಣ ಇಲ್ಲೋಕೀರೋ ಶುಕವಾಚಕಾಃ

೫೦. ಗಿಡ್ಡ -'ಘಿಟ್ಟೋಕುಬ್ಜಃ ಸಂ-ಕ್ಷುದ್ರ'

೫೧. ಗುಡ್ಡ --ಕುಹಡೋಕುಬ್ಜಃ' ಪ್ರಾಕೃತ--ಖುದ್ದ (ಕ್ಷುದ್ರ) .

೫೨. ಗುಟಕು --'ಘುಟ್ಟ ಇ ಪಿಬುತಿ' ಇದು ಅನುಕರಣವಾಚಕವಾಗಿಬಹುದು ಅಥವಾ ಸಂ-ಗಿಲಿತ?

೫೩. ಗೊಂಚಲ —'ಗೋಚ್ಛಾಮಂತರೀ ' ಸಂ-- ಗುಚ್ಛ-ಗುಂಜಃ

೫೪. ಗೊಂಡೆ--'ಗೊಂಡೀಮಂಜರೀ'ಸಂ - ಗುಂಜಃ

೫೫. ಗೊಂದಣ, ಗೊಂದಳ-' ಕುಂದಣೋರಾಸಕಃ' ಸಂ- ಗುಧ್ ಗೋಧತೆ

೫೬. ಚಿಕ್ಕ --' ಚಿಕ್ಕಾ ಅಲ್ಪಂ' ಸಂ- ಚುಟ್‌ಧಾತು ' ಚಿಟ್ಟು, ಚುಟುಕು ಇವೆಲ್ಲ ಒಂದೇ ಮೂಲದಿಂದ ಹುಟ್ಟಿರಬಹುದು.

೫೭. ಜಂಗುಳಿ --'ಝೊಂಡಲಿಆ, ರಾಸಕಸದೃಶಕ್ರೀಡಾ ' ಸಂ-ಚಂಗಕ್ರಮಣಂ ಚಂಕ್ರಮಣಂ?

೫೮. ಜಡತ--'ಜಡಿಲಂ-ಖಚಿತಂ 'ಸಂ-ಝುಟ್?

೫೭. ಜಡಿ--'ಝಡೀನಿರಂತರವೃಷ್ಟಿ' ಸಂ-ಚಟ್‌ಧಾತುವಿಗೆ ಮಳೆಗರೆ ಎಂಬ

ಅರ್ಥವಿದೆಯಂತೆ (ಆಪಟೆ)

೬೦. ಜುಟ್ಟು --'ಚಡೋತಥಾಚೊಟ್ಟೇಶಿಖಾ' ಸಂ--ಚೂಡಾ.

೬೧. ಟಂಕೆ--'ಟಂಕೋಜಂಘಾ' ಸಂ-ಟಂಕಃ

೬೨. ತಟ್ಟೆ --' ತಟ್ಟೇವೃತಿ ;ಟಟ್ಟೆತಿ ಜವಣಿಆ (ಯವನಿಕಾ) ಸಂ-ತ್ರಾತಂತ್ರಾಣಂ?

೬೩. ತಳಾರ, ತಳವಾರ --'ತಲಾರೋ ನಗರಾರಕ್ಷಕಃ' ಸಂ-- ಸ್ಥಲವಾರಃ-

೬೪. ತಾಮರಸ- 'ತಾಮರಸಂಜಲೋದ್ಭವ ಪುಷ್ಪಂ, ಪದ್ಮವಾಚಕಸ್ತು ಸಂಸ್ಕೃತಸಮಃ'

೬೫. ತಿಣ್ಣ-'ತಿಣ್ಣೋದೃಪ್ತಃ' ಸಂ--ಸ್ತ್ಯಾನ?

೬೬. ತಿಮಿಂಗಿಲ--'ತಿಮಿಂಗಿಲೋ ಮಿನಃ ಮತ್ಸ್ಯವಿಶೇಷವಾಚಕಸ್ತು ಸಂಸ್ಕೃತಸಮಃ

೬೭. ತುಪ್ಪ--'ತುಪ್ಪೋಕೌತುಕಂವಿವಾಹ್ ಸರ್ಪಪ್ರೋಭ್ರಕ್ಷಿತಃ ಸ್ನಿಗ್ಧಃ ಕುಟಪಶ್ಚೇತಿಷಡರ್ಥಃ' ಕನ್ನಡದಲ್ಲಿ ಸ್ನಿಗ್ಧ ಇದೊಂದೇ ಅರ್ಥವಿರಲಿಕ್ಕೆ ಕಾರಣವೇನು ? ಇದು ಅಚ್ಚಗನ್ನಡವಾಗಬಹುದೇ?

೬೮. ಸನ್ನಿ--'ಣಸ್ನಾ ಣಸ್ನೀ ಣಸ್ನಿಣೀ ಗೋವಾಚಕಾಃ' ಈ ನಾಮಗಳು ಸಂಸ್ಕೃತದಲ್ಲಿ ಸಾಮಾನ್ಯ ಗೋವಾಚಕಗಳಲ್ಲದೆ ದೇಶೀಯೆಂದು [illegible]ರಬಹುದು. ದೇಶೀನಾಮಗಳು ಪ್ರಥಮಾಕ್ಷರವು ಣಕಾರವಾಗಬೇಕಲ್ಲದೆ ನಕಾರವಾಗಬಾರದೆಂದು ಹೇಮಚಂದ್ರನ ಮತ. ಆದಕಾರಣ ಅವನ ರತ್ನಾವಲಿಯಲ್ಲಿ ಕನ್ನಡ ಮಾತುಗಳಿದ್ದರೂ ಅವನಿಗೆ ಕನ್ನಡ ತಿಳಿದಿತ್ತೆಂದು ಹೇಳಲಿಕ್ಕಾಗುವುದಿಲ್ಲ. ಅವನು ಕೇಳಿದ ಅಥವಾ ಪ್ರಾಕೃತದಲ್ಲಿ ನೋಡಿದ ನಾಮಗಳು ಆವ ಭಾಷೆಗಳಿಂದ ಬಂದುವೆಂಬುದು ಚನ್ನಾಗಿ ತಿಳಿಯದೆ ನಿಘಂಟಿನಲ್ಲಿ ಸೇರಿಸಿರಬೇಕು.

೬೯. ನೇಸರು --'ಣೇಸರೋರವಿಃ' ಇದು ದಿನೇಶ್ವರಶಬ್ದಭವವಾದರೆ ವಿದರ್ಭ, ಗುರ್ಜರರಾಷ್ಟ್ರ ಮುಂತಾದ ದೇಶಗಳಲ್ಲಿ ಹೇಮಚಂದ್ರನು ಕೇಳಿರಬಹುದುದಿತ್ತು. ಕನ್ನಡಿಗ ಶಿಷ್ಯರ ಮುಖಾಂತರ ಕೇಳಿದ್ದರೆ ಣ

ಕಾರವನ್ನು ಪ್ರಯೋಗಿಸಿದ್ದು ಆಶ್ಚರ್ಯವೇ.

೭೦. ಪಕ್ಕಾ --'ಪಕ್ಕೋಸಮರ್ಥಃ' ಸಂ-ಪಕ್ವ.

೭೧. ಪಡದೆ--' ಪಡವಾಯವನಿಕಾ ' ಸಂ-ಪ್ರತಿವಾರಃ, ಪ್ರತಿರೋಧಃ?

೭೨. ಪಲ್ಲಟ --'ಪಲ್ಲಟ್ಟೋಪರ್ಯಸ್ತ'- ತದ್ಭವಾಯಿತು.

೭೩. ಪಡ್ಡೆ --'ಪಡ್ಡೀಪ್ರಥಮಪ್ರಸೂತಾ 'ಸಂ--ಪ್ರೌಢಾ?

೭೪. ಪಾಂಡುರಂಗ--'ಪಾಂಡುರಂಗೋರುದ್ರ,' ಈಗ ವಿಷ್ಣುವಿನ ಅವತಾರವೆನ್ನುವರು.

೭೫. ಪೆಂಡೆಯ -' ಪೆಂಡಂವಲಯಃ' ಸಂ--ಪಾದಾಂದುಃ-

೭೬. ಪೊಟ್ಟೆ, ಹೊಟ್ಟೆ --'ಪೊಟ್ಟಂ ಉದರಂ'. ಚೈತ್ರದ ಸಂಚಿಕೆಯಲ್ಲಿ ಅಜ್ಞಾತ ತದ್ಭವಗಳನ್ನು ನೋಡುವುದು.

೭೭. ಪೋಗಂಡ--'ಪೋಲಿಂಡೋಷಂಡಃ' ಇದು ಸಂಸ್ಕೃತವೇ.

೭೮. ಪೋಣಿಸು --'ಪೋಣಿ ಆ ಸೂತ್ರ ಭೃತ್‌ತರ್ಕುಃ'ಸಂ-ಪ್ರವೇಣ್?

೭೯. ಬೆಪ್ಪ-'ವೆಪ್ಪೋಭೂತಾದಿಗ್ರಹಿತಃ' ಇದರ ಪರಿಣಾಮ-ವೇಪನ. ಆದರೂ ಇದು ಶುದ್ಧದೇಶೀಯ ಶಬ್ದವೇ ಆಗಿರಬಹುದು.

೮೦. ಬೊಪ್ಪ--'ಒಪ್ಪೋಪಿತಾ 'ಸಂ-ಬೃಹತ್‌ಪಿತಾ?

೮೧. ಬಂಡಿ-'ಭಂಡೀಗಾಂತ್ರೀ. 'ಸಂ-ವರ್ತನೀ?

೮೨. ಭಾವ-'ಭಾವೋಭಾಗಿನೇಯಃ' ಸಂ-ಭಾಮಃ

೮೩. ಮದ್ದಲೆ -'ಮದ್ದಲೋಮುರಜಃ' ಸಂ-ಮರ್ದಲಃ-

೮೪. ಮುಂಗುಲಿ -' ಮುಂಗುಸೋನಕುಲವಾಚಕಃ ' ಸಂ-ಲಿಂಗೂಷಃ?

೮೫. ಮೊಗ್ಗೆ -'ಮೊಗ್ಗರೋಮುಕುಲಂ' ತದ್ಭವವಾಯಿತು.

೮೬. ಮೈಲು--'ಮ ಇಲೋ ಗತತೇಜಾ' ಸಂ-ಮಲಿನ

೮೭. ರೊಟ್ಟಿ --'ರೊಟ್ಟಂತಂದು ಲಪಿಷ್ಟಂ' ಸಂ-ರುಚ್ಯ?

೮೮. ಲೊ -'ಲೊಟ್ಟೆಂಪ್ರಿಯಂವದಃ' ಸಂ-ಲುಟ್, ಲೋಟಯತಿ =ಮಾತಾಡು?

೮೯. ವಲಂ-'ವಲೇನಿಶ್ಚಯೋಃ' ಸಂ-ವಲ್, ಬಲ್. ಈ ಧಾತುವಿನಿಂದ ಹುಟ್ಟುವುದು ಅಸಾಧ್ಯವಲ್ಲ.

೯೦. ವಲ್ಲಿ, ಒಲ್ಲಿ-'ಓಲಿಲಿಂ ಅಂಗೇ ಪಿನದ್ಧಂ' ಸಂ--ವಲ್ಲಃ

೯೧. ಶೇಂದಿ-'ಸಿಂದೀಖರ್ಜೂರೀ' ಸಂ-ಸಿಂದುಕಃ? ಇದರ ರಸ,

೯೨. ಸಿಪ್ಪೆ-'ಸಿಪ್ಪಂಪಲಾಲೇ ' ಸಂ- ಶಿಂಬಾ

೯೩. ಸುರಗಿ-'ಸುರಂಗೀಶಿಗ್ರುತರುಃ' ತದ್ಭವವಾಯಿತು.

೯೪. ಸೂಟೆ -'ಸುಲೀಉಲ್ಕಾ' ಸಂ--ಜ್ಯೂತಃ? ಚೂಡಾ?

೯೫. ಸೆಟ್ಟಿ-'ಸೆಟ್ಟೀಗ್ರಾಮೇಶಃ' ಸಂ--ಶ್ರೇಷ್ಠಿನ್.

೯೬. ಹರಿಯಾಲೀ ಹರಿವೆ -'ಹರಿ ಆಲೀದೂರ್ವಾ ' ಸಂ--ಹರಿತಾ, ಹರಿತಕ,

೯೭. ಹಲಬಲ-'ಹಲಬೋಲೋಕಲಕಲಃ'-- ಅನುಕರಣವಾಚಕ

೯೮. ಹೊಡೆ-' ಆಹೋಡಇತಾಡಯತಿ' ಸಂ--ಅಹನ್. ಇವು ಬೇರೆ ಬೇರೆ ಶಬ್ದಗಳಾಗಿಬಹುದು.

೯೯. ಪೊಂಡ--'ಪುಂಢೋಗರ್ತಃ' ಚೈತ್ರದ ಸಂಚಿಕೆಯಲ್ಲಿ ಅಜ್ಞಾತ ತದ್ಭವಗಳನ್ನು ನೋಡುವುದು.[ ಈ ಸಾಹಿತ್ಯ ವಾಚಿಕೆಯ ಪು.೭೭]

೧೦೦. ಪೊಳೆ--'ವಹಾಲೀಲಘುಜಲಪ್ರವಾಹ'ಸಂ--ವಹಾ.

ಈ ನಾಮಗಳಲ್ಲಿ ಕೆಲವು ಸಂಸ್ಕೃತ ತತ್ಸಮಗಳೇ. ಬಹುತರ ಭಾಗದವು ತದ್ಭವಗಳು. ಕರ್ಣಾಟಕ ದೇಶೀಯೆನ್ನಬಹುದಾದ ಮಾತುಗಳು ಸ್ವಲ್ಪವೇ. ಗೋದಾವರಿಯವರೆಗೆ ಕನ್ನಡವು ವ್ಯಾಪಿಸಿತ್ತೆಂದು ನೃಪತುಂಗನು ಹೇಳುವುದರಿಂದ ಹೇಮಚಂದ್ರನ ವೃತ್ತಿಕಾರನೂ ಕೆಲವು ಕನ್ನಡಿಗರನ್ನು ನೋಡಿರಬಹುದು. ಅವರಿಗೆ ಕನ್ನಡಿಗರಲ್ಲಿ ಶಿಷ್ಯರಿರಬಹುದಿತ್ತು. ಆದರೆ ಅವರಿಗೆ ಕನ್ನಡ ತಿಳಿದಿತ್ತೆಂದು ಹೇಳುವುದು ದುಃಸಾಧ್ಯ. ಮೇಲೆ ಉದ್ಧರಿಸಿ ಹಾಕಿದ ಅನೇಕ ಸಾಮಗಳು ಮರಾಠಿಯಲ್ಲಿಯೂ ಸಿಕ್ಕುತ್ತವೆ. ಕೆಲವು ನಾನು

ವಿಚಾರಿಸಿದ ಮಟ್ಟಿಗೆ ಈಗ ಕನ್ನಡದಲ್ಲಿ ಮಾತ್ರ ಕಾಣಬಹುದು. ನಿಘಂಟಿನಲ್ಲಿಯೂ ವ್ಯುತ್ಪತ್ತಿಯಲ್ಲಿಯೂ ಎಷ್ಟು ಕೊರತೆಗಳಿದ್ದರೂ ಕರ್ಣಾಟಕ ಶಬ್ದಗಳ ವ್ಯುತ್ಪತ್ತಿಯನ್ನು ಶೋಧಿಸುವವರಿಗೆ ಸಿಕ್ಕುವ ಸಾಹಿತ್ಯಕ್ಕೆ ನಾವು ಕೃತಜ್ಞರಾಗಿರಬೇಕು.

ಕ.ಸಾ. ಪರಿಷತ್ಪತ್ರಿಕೆ. ಸಂ ೨. ೧೯೧೭ ಪು. ೧೨೮-೧೮೪

## ■ ಕನ್ನರ, ಕನ್ನಡಿ, ಕನ್ನಡ

ಈ ಹಲವು ಮಾತುಗಳು ಹಲವು ಬಗೆಯಾಗಿ ಹುಟ್ಟಿವೆ 'ಕೃಷ್ಣರಾಜ' ಎಂಬ ಸಂಸ್ಕೃತನಾಮವು ಪ್ರಾಕೃತದಲ್ಲಿ ' ಕಣ್ಣರಾಅ' ಆಗುತ್ತದೆ--(ವರರುಚಿ) ಈ ಣಕಾರವು ಮರಾಟಿ, ಗುಜರಾಟಿ ಮುಂತಾದ ಭಾಷೆಗಳಲ್ಲಿ ನಕಾರವಾಗುತ್ತದೆ. --ಉದಾ-- ಕೃಷ್ಣಗಿರಿ = ಕನ್ಹೇರಿ; ಕೃಷ್ಣಪ್ಪಾ = ಕಾನೋಬಾ. ಪೊನ್ನನಿಗೆ ಕವಿಚಕ್ರವರ್ತಿ ಎಂಬ ಬಿರುದನ್ನು ಕೊಟ್ಟ ಕೃಷ್ಣರಾಜನಿಗೆ ಮರಾಟಿ ಗುಜರಾಟಿ ಭಾಷೆಗಳನ್ನಾಡುವವರೂ ಅಧೀನರಾಗಿದ್ದುದರಿಂದ ಆತನು ಕನ್ನರನೆಂಬ ಪ್ರಾಕೃತ ಹೆಸರನ್ನು ಹಾಕಿಕೊಂಡನು. ರನ್ನನಿಂದ ಕೀರ್ತಿತನಾದ ಗೋವಿಂದರನ ಸಂಸ್ಕೃತ ನಾಮವು ಗೋವಿಂದರಾಜ ಎಂದಿರಬಹುದಿತ್ತು.

ಕನ್ನಡಿಗೆ ತಮಿಳಿನಲ್ಲಿ ಕಣ್ಣಾಡಿ ಎನ್ನುವುದುಂಟು. ಆದರ್ಶದ ಪರ್ಯಾಯ ಪದವಾದ ಈ ಮಾತಿಗೆ ಕಣ್ಣಿನಂತೆ ಕಾಣಿಸುವುದು ಎಂಬ ಅರ್ಥವಿರಬೇಕು. ಗಿಳಿಗೆ ಕನ್ನಡವಕ್ಕಿ ಎಂಬ ಹೆಸರು ಹೇಗೆ ಬಂತು? ಪ್ರಾಕೃತದಲ್ಲಿದ್ದ ದೇಶೀಯ ನಾಮಗಳನ್ನು ಸಂಗ್ರಹಿಸಿ ಬರೆದ ಹೇಮಚಂದ್ರನ ನಿಘಂಟಿನಲ್ಲಿ "ಕಣ ಇಲ್ಲೋ ಕೀರೋ ಕುಂತೋ ಶುಕವಾಚಕಾಃ" ಎಂದಿರುವುದು. ಕಣಇಲ ಶಬ್ದದಲ್ಲಿರುವ ಇಲ ಪ್ರತ್ಯಯವು ಗಾವಿಲ ಮುಂತಾದ ಪದಗಳಲ್ಲಿ ಕನ್ನಡಿಗರಿಗೆ ಸುಜ್ಞಾತವಾಗಿದೆ. ಅದೇ ಅರ್ಥದಲ್ಲಿ ಡ ಪ್ರತ್ಯಯವು ಬರುತ್ತಿತ್ತು. ಮೇಘ, ಮೇಹ, ಮೇಹಡ, ಮೋಡ, -- ಹೀಗೆ ಮೋಡ ಶಬ್ದವು ಹುಟ್ಟಿತು. " ಕರ ಇಲೀ ಶುಷ್ಕವೃಕ್ಷಃ"--(ಹೇಮಚಂದ್ರ). ಇಲ್ಲ ಪ್ರತ್ಯಯಕ್ಕೆ ಬದಲಾಗಿ ಡಕಾರದ ಪ್ರಯೋಗದಿಂದ ಕನ್ನಡದಲ್ಲಿ ಇದು ಕರಡ ಆಯಿತು. ಹೀಗೆಯೇ ಕಣ ಇಲ ಪಕ್ಷಿಗೆ ಕಣಡ, ಕನ್ನಡವಕ್ಕಿ ಎಂದರೆಂದು ಕಾಣುತ್ತದೆ. ಇದಕ್ಕೆ ಪಂಡಿತಪಕ್ಷಿ ಎಂಬ ಅರ್ಥವಾದರೆ ಇದು ಕಣ್ವ ಪದದಿಂದ

ಹುಟ್ಟಿರಬಹುದು. ಧಾನ್ಯದ ತೆನೆಗಳನ್ನು ತಿನ್ನುವ ಪಕ್ಷಿ ಎಂಬ ಅರ್ಥವಿದ್ದರೆ ಕಣಾದ ಪದದಿಂದ ಹುಟ್ಟಿರ ಬಹುದು.

ನಡೆ, ನುಡಿ , ಚಂದನ, ಸುಗಂಧಪುಷ್ಪ --- ಇವುಗಳಿಂದ ಕಮ್ಮಿತಾದ ದೇಶಕ್ಕೆ ಕರ್ಪುಳ್ಳ ನಾಡಿಗೊಪ್ಪುವ ಕರ್ಣಾಟವೆಂಬ ಹೆಸರನ್ನೇಕೆ ಹಾಕಿದರೋ ಎಂದು ಕೇಳಿದ ಕವಿಗಳು ಚತುರರೇ ಸರಿ. ನಾಡಿಗೆ ಹೆಸರಿಟ್ಟವರು ಕವಿಗಳಾಗಿರಲಾರರೆಂಬುದೇ ಅವರ ಪ್ರಶ್ನೆಗೆ ಪ್ರತ್ಯುತ್ತರವೆನ್ನಬಹುದು. ಪಂಪನು ವರ್ಣಿಸಿದ ಬನವಾಸೆಯಂತೆ ಕೆಲವು ತೆಂಕಣಭಾಗಗಳು ಕಮ್ಮಿತಾಗಿಯೇ ಇವೆ. ಆದರೆ ಕನ್ನಡದ ತಿರುಳನ್ನೂ ಬಡಗಣ ಭಾಗಗಳನ್ನೂ ಕವಿಗಳು ಅತಿಶಯೋಕ್ತಿಯಿಂದ ಕಮ್ಮಿತೆಂದು ವರ್ಣಿಸಬೇಕಲ್ಲದೆ ಸಾಮಾನ್ಯ ಜನರು ವರ್ಣಿಸುವ ಹಾಗಿಲ್ಲ. ಈ ತಾರತಮ್ಯವು ಮನಸ್ಸಿಗೆ ಹತ್ತಿ ಕನ್ನಡದ ತಿರುಳಿನಲ್ಲಿ ಬಾಳಿದ ಪಂಪನು 'ತೆಂಕನಾಡಮರೆಯಲ್ಕೆನ್ನೇಂ ಮನಂ ಬರ್ಕುಮೇ' ಎಂದು ಬರೆದನೆಂದು ಕಾಣುತ್ತದೆ.

'ಕಮ್ಮಿತು' ಶಬ್ದಕ್ಕೆ ಸುಗಂಧರ್ಥವಲ್ಲದೆ ಕಮನೀಯತೆಯ ವ್ಯಾಪಕತ್ವವು ತಮಿಳಿನಲ್ಲಿಯೂ ತೆಲುಗಿನಲ್ಲಿಯೂ ಕಾಣಬರುತ್ತದೆಯೇ ? ಇದು ಸಂಸ್ಕೃತ 'ಕಮನೀಯ' ಪದದಂತೆ ಕೇಳಿಸುವುದರಿಂದ ಅದರ ಅರ್ಥವನ್ನು ಕವಿಗಳು ಈಚೆಗೆ ವಿಸ್ತರಿಸಿದರೆಂದು ಎಣಿಸಕೂಡದೇ ?" ಕವಿಮಾರ್ಗದೊಳೊಖ್ಖಾಣ ಪಠವಣೆಪ ಕಂಮ್ಮೆಸುವ" ಎಂಬಲ್ಲಿಯೂ "ಕಂಮ್ಮೆಸುವ ಕಮ್ಮರಲ್ಲಗಳ್" ಎಂಬಲ್ಲಿಯೂ ಕಂಮ್ಮೆಸು ಶಬ್ದದ ಅರ್ಥದಲ್ಲಿ ಭೇದವಿಲ್ಲವೇ ? ಒಂದು ಸಕರ್ಮಕ ಇನ್ನೊಂದು ಅಕರ್ಮಕ ಕ್ರಿಯೆ. ಅವು ಒಂದೇ ಮಾತೆಂದು ನಿಶ್ಚಯವೇನು? ಒಖ್ಖಾಣ=ವ್ಯಾಖ್ಯಾನ; ಠವಣ=ಸ್ಥಾಪನ ಅಥವಾ ಸ್ತೂಪನ. ಹೀಗೆಯೇ ಪರಿಷ್ಕರಿಸು ಎಂಬರ್ಥದಲ್ಲಿ ಪ್ರಯೋಗಿಸುವ ಮರಾಟಿ" ಕಮಾವಿಣೆ" ಮತ್ತು ರನ್ನದ "ಕಂಮ್ಮೆಸು" ಇವೆರಡೂ ಒಂದೇ ಪದದ ತದ್ಭವವಾಗಿರಬಾರದೇ? ಇದು ಕೃ ಧಾತುವಿನಿಂದ ಹುಟ್ಟಿತೊ, ಕಮ್ ಧಾತುವಿನಿಂದ ಹುಟ್ಟಿತೊ ತಿಳಿಯದು.

ಕ. ಸಾಹಿತ್ಯ ಪರಿಷತ್ಪತ್ರಿಕೆ ೪, ೨-೩ ಜುಲೈ-ಅಕ್ಟೋ. ೧೯೧೯

## ೬. ಸ್ವದೇಶಾಭಿಮಾನ

ಆಡುವ ಭಾಷೆಯನ್ನು ಬರೆಯುವುದೇ ಲೋಕದ ರೂಢಿ. ಆದರೆ ಗ್ರಂಥ ರಚನೆಯಲ್ಲಿ ಉಪಯೋಗಿಸದ ಭಾಷೆಗಳಲ್ಲಿ ನೆಂಟರಿಷ್ಟರೊಳಗೆ ಪತ್ರ ವ್ಯವಹಾರಕ್ಕೂ ಬಾರವು ಎಂದು ಭ್ರಮಿಸುವುದೂ ಉಂಟು. ಹೀಗೆ ದಕ್ಷಿಣ ಕನ್ನಡದಲ್ಲಿ ತುಳು ಕೊಂಕಣಿ ಭಾಷೆಗಳನ್ನು ಆಡುವ ಬಹು ಜನರಿದ್ದರೂ ಅವುಗಳನ್ನು ಸಾಧಾರಣವಾಗಿ ಬರೆಯುವ ಪದ್ಧತಿಯಿಲ್ಲ. ಗೋವೆಯಲ್ಲಿ ಒಬ್ಬ ವಿಲಾಯಿತಿಯವನು ಕೊಂಕಣಿಗೆ ವ್ಯಾಕರಣವನ್ನು ಕಲ್ಪಿಸಿ ಕ್ರೈಸ್ತರ 'ಹೊಸ ಒಡಂಬಡಿಕೆ'ಯನ್ನು ಮರಾಠಿ ಪುರಾಣಗಳ ಹಾಗೆ ವೃತ್ತದಲ್ಲಿ ಬರೆದು ಮುನ್ನೂರು ವರ್ಷವಾಯಿತು. ಗೋವೆಯಲ್ಲಿ ಒಂದು ಕೊಂಕಣಿ ಪತ್ರಿಕೆಯನ್ನು ನಡಿಸುತ್ತಾರೆ. ತುಳುವಿನಲ್ಲಿಯೂ ಕೊಂಕಣಿಯಲ್ಲಿಯೂ ಹಲವು ಪುಸ್ತಕಗಳನ್ನು ಪ್ರಕಟಿಸಿರುವರು. ಈ ಭಾಷೆಗಳನ್ನು ಪೂರ್ವದಲ್ಲಿ ಹಿಂದುಗಳೇ, ಈಗಲೂ ಹೆಚ್ಚಾಗಿ ಅವರೇ ಮಾತಾಡುತ್ತಿದ್ದರೂ ಅವರು ತಮ್ಮ ಮಾತೃ ಭಾಷೆಯಲ್ಲಿ ಅಭಿಮಾನವನ್ನು ತೋರಿಸದೆ ಇಂಗ್ಲೀಷ್ ಕನ್ನಡಗಳ ಆಶ್ರಯವನ್ನೇ ಹುಡುಕುವುದು. ಆಶ್ಚರ್ಯವಲ್ಲವೆ? ತುಳುವಿನಲ್ಲಿಯೂ ಕೊಂಕಣಿಯಲ್ಲಿಯೂ ಹಿಂದುಗಳು ಪದ್ಯಗಳನ್ನು ರಚಿಸಿದ್ದಾರೆಂಬುದು ನಿಜವೆ. ಮಂಗಳೂರಲ್ಲಿ ಅಧ್ಯಾಪಕರಾಗಿ ಇದ್ದು, ಈಗ ಕೊಚ್ಚಿಯಲ್ಲಿರುವ ಶ್ರೀಮಾನ್ ಶೇಷಗಿರಿ ಪ್ರಭುಗಳು ಒಂದು ಕೊಂಕಣಿ ಪತ್ರಿಕೆಯನ್ನು ಸ್ಥಾಪಿಸಲಿಕ್ಕೆ ತಮ್ಮಿಂದಾಗುವಷ್ಟು ಪ್ರಯತ್ನಗಳನ್ನು ಮಾಡಿದರೆಂದು ಕೇಳಿದ್ದೇನೆ. ಗ್ರಂಥಗಳನ್ನು ರಚಿಸುವುದೂ ಪತ್ರಿಕೆಗಳನ್ನು ನಡಿಸುವುದೂ ಪ್ರಯಾಸದ ಕಾರ್ಯಗಳು. ಅದಲ್ಲದೆ ಹಿಂದೂಸ್ಥಾನದಲ್ಲಿ ಈಗಲೇ ಅನೇಕ ಗ್ರಂಥಸ್ಥ ಭಾಷೆಗಳಿರುವುದರಿಂದ ಇನ್ನೂ ಕೆಲವನ್ನು ವೃದ್ಧಿಗೊಳಿಸುವ ಪ್ರಯತ್ನದಿಂದ ದೇಶಕ್ಕೆ ಹಿತವೇನು ಎಂದು ಕೆಲವರು ವಾದಿಸುವರು. ಅದಂತಿರಲಿ; ತುಳು, ಕೊಂಕಣಿ, ಕರ್ಣಾಟಕ ಮರಾಠಿ ಇವೆಲ್ಲವೂ ಕಾಲಕ್ರಮದಿಂದ ಅಳಿದು ಹೋಗಿ ಇಂಗ್ಲಿಷು ಎಂದೇ ನಿಲ್ಲುವುದಾದರೆ ನಿಲ್ಲಲಿ.

ಆದರೆ ಇಂತಹ ಭವಿಷ್ಯವನ್ನು ಯೋಚಿಸಿ ಈಗಲೇ ತುಳು ಕೊಂಕಣಿ ಭಾಷೆಗಳನ್ನು ಸಂಭಾಷಣೆದಲ್ಲಿಯೂ ವರ್ಜಿಸಲಿಕ್ಕೆ ನಾವು ಮೊದಲು ಮಾಡಲಿಲ್ಲವಷ್ಟೆ. ಬಾಲ್ಯದಲ್ಲಿ ತಂದೆ ತಾಯಿಗಳು ನಮಗೆ ಕಲಿಸುವ ಭಾಷೆಯನ್ನು ಮರೆಯುವುದೇ ಪ್ರಯಾಸವಲ್ಲದೆ ಅದರ ಅಭ್ಯಾಸಕ್ಕೆ ಕನ್ನಡ ಇಂಗ್ಲೀಷ್‌ಗಳ ಅಧ್ಯಯನದಲ್ಲಿ ಪೇಚಾಡುವಂತೆ ಶ್ರಮ ಪಡಬೇಕಾಗಿಲ್ಲ. ತುಳು ಕೊಂಕಣಿಗಳನ್ನು ಬರಿಯಲಿಕ್ಕೆ ನಾವು ಬಾಲ್ಯದಲ್ಲೇ ಕಲಿಯುವ ಲಿಪಿಗಳೇ ಅಲ್ಲದೆ ಬೇರೆ ಲಿಪಿಗಳನ್ನು ಉಪಯೋಗಿಸಬೇಕೆಂತಿಲ್ಲ. ಹೀಗಿರಲು ಸುಣ್ಣದ ಕೇರಿಯ ವೆಂಕಟರಾಯರು ತಮ್ಮ ಕುಮಾರ ದಿನಕರ ರಾವ್ ಬಿ.ಎ. ಇವರಿಗೆ ಒಂದು ಪತ್ರವನ್ನು ಬರೆಯಬೇಕಾದರೆ ಜೊನ್ ಬುಲ್ ಸಾಹೇಬರ ಭಾಷಗೆ ಏಕೆ ಶರಣೆನ್ನಬೇಕು?" ಚಿರಂಜೀವಿ ದಿನೂಕ ಆಶೀರ್ವಾದು. ಆಮಗೆಲ್ಯಾ ಲೀಲುಕ ಏವಚಾ ಚೈತ್ರಾಂತು ಬಾರಾ ವರ್ಸಾಂತು ಲಾಗತಾತಿ. ಹ್ಯಾ ಗಾವಾಂತು ಕಿತಲಿಯಿಂ ಜಾತಕಂ ಪಳಯಿಲಿ. ಮೇಳನು ಯೆವಜೆಕಡೆ ವಿಪರೀತ ದೀಣೆಂ ಮಾಗತಾತಿ. ಅರೆ, ಭಾರಿ ಫಜಿತಿ ಜಾಲ್ಯಾ. ಮದ್ರಾಸಾಂತು ಮೆರವಣಿಗೆ ಮೋಹನು ಮ್ಹಣಿಂ ಮಾತೃಕ್ಲೇಶನ* ಪಾಸ್ ಜಾಲ ಏಕ್‌ಲೊಲೋ ಚೆರ್ಕೊ ಅಸಖ್ಯಂ ತಾಗಲೆಂ ಜಾತಕಂ ಘುವುನ್ ಬಳ್ಳೆ"- ಹೀಗೆ ಮಾತಾಡುವಂತೆಯೇ ಬರೆಯುವುದರಲ್ಲಿ ಕಷ್ಟವೇನು? ಕನ್ನಡ ಇಲ್ಲವೆ ನಾಗರಿಲಿಪಿಯನ್ನು ಕಲಿತ ಚಿಕ್ಕ ಹುಡುಗಿಯರೂ ಬರೆಯಬಹುದು. ಕೆಲವು ಸಂದರ್ಭಗಳಲ್ಲಿ ಬೇಕಾದ ನುಡಿಗಳು ಒದಗದಿರಬಹುದು. ಮಾತಾಡುವಾಗಲೂ ಇಂತಹ ತೊಡಕು ಬರುವುದಿಲ್ಲವೆ? ಅನ್ಯ ಭಾಷೆಯ ಶಬ್ದಗಳನ್ನು ಸೇರಿಸಿಕೊಂಡರೆ ತೀರಿತು. ಪುರೋಹಿತರು ಜಾತಿಯವರ ಮನೆಗಳಲ್ಲಿ ಲಗ್ನಕ್ಕೆ ಆಮಂತ್ರಣವನ್ನು ಕೊಡುವಾಗ ಕೊಂಕಣಿಯ ಶಬ್ದ ಸಂಪತ್ತು ಸಾಕಾಗುವುದಂತೆ. ಅದೇ ಆಮಂತ್ರಣವನ್ನು ಲಗ್ನ ಪತ್ರಿಕೆಯಲ್ಲಿ ಬರೆಯುವಾಗ ಆ ಭಾಷೆಗೆ ಬಡತನವು ಹೇಗೆ ಬರುವುದು? ಒಂದು ಭಾಷೆಯಲ್ಲಿ ರಾಮಾಯಣ ಮಹಾಭಾರತಗಳನ್ನು ರಚಿಸದೆ ಹೋದರೆ ಅದು ಜಾತಿಯವರೊಳಗೆ ಪ್ರತಿವ್ಯವಹಾರಕ್ಕೂ ನಿಷಿದ್ಧವೆ? ಕೊಂಕಣಿಯು ಸಂಸ್ಕೃತದಿಂದ ಹುಟ್ಟಿದ ಭಾಷೆ. ರತ್ನಗಿರಿಯಲ್ಲಿ ರಾಜಪುರದಿಂದ, ಕೇರಳದಲ್ಲಿ ಕೊಚ್ಚಿಯವರೆಗೂ ಎಷ್ಟೋ ಜನರು ಮಾತಾಡುವರು. ತುಳು ಭಾಷೆಯ,

---

*ಮೆಟ್ರಿಕ್ಯುಲೇಶನ್!

ತಮಿಳು ಕನ್ನಡಗಳ ಸಹೋದರಿ. ಇವುಗಳನ್ನು ಬರೆಯಲಿಕ್ಕೆ ನಾಚಿಕೆ ಪಡಬಹುದೆ?

ಸ್ವದೇಶಾಭಿಮಾನಿ. ಮಂಗಳೂರು. ದಿ. ೧೨ ಅಕ್ಟೋಬರ್ ೧೯೧೭

(ಈ ಲೇಖನಕ್ಕೆ ವಿರುದ್ಧವಾಗಿ ಅಷ್ಟೇ ದೊಡ್ಡದಾದ ಒಂದು ಪತ್ರ ಸ್ವದೇಶಾಭಿಮಾನಿಯಲ್ಲಿ ಪ್ರಕಟವಾಯಿತು. ಆ ಲೇಖಕರ ಹೆಸರೂ 'ಎಚ್.ಎನ್.ರಾವ್ ಎಂಬುದು. ಸಂ.)

## ೭ ಕೊಂಕಣಿಯ ರಹಸ್ಯಗಳು

ಸಂಸ್ಕೃತಭವ ಶಬ್ದಗಳಿಗೆ ಕರ್ಣಾಟಕ ವ್ಯಾಕರಣಕರ್ತರು ಸೂತ್ರಗಳನ್ನು ಕಲ್ಪಿಸಿದಂತೆಯೇ ಕೊಂಕಣಿಯಲ್ಲಿಯೂ ಬರೆಯಬಹುದೆಂದು ಹಿಂದಿನ ಲೇಖದಲ್ಲಿ ಹೇಳಿದೆನಷ್ಟೆ.* ಈ ವಿಚಾರವನ್ನು ಇಂದು ಸಂಕ್ಷೇಪವಾಗಿ ಮುಗಿಸಿಬಿಡುವೆನು .

ಸ್ವರಗಳಲ್ಲಿ ಋಕಾರವು ಉಚ್ಚಾರಕ್ಕೆ ಕಠಿಣವಾಗಿ ಅದನ್ನು ಲೋಪಿಸುವರು. ಉದಾಹರಣ-- ಕೃತ್ತಿ, ಕಾತಿ ; ಕೃಂತನ, ಕಾಂಕಣ; ಕೃಶರ, ಕಿಚ್ಚಡಿ; ಜೃಂಭ, ಜಾಂಬಈ; ನಪ್ತನಾತ್ತು;ನಿವೃತ್ ನಿವಚೆಂ; ಪೃಥುಕ,ಪೋವು; ಭೃಜ, ಭಾಜಚೆಂ; ಭೃಷ್ಟ, ಬೆಟ್ಟೆಂ; ಮೃಗ, ಮಾಗ; ಮೃತ ಮದೆಂ; ಮೃಷಾ, ಮೋಸು; ವೃತಿ, ವಯಿ; ವೃದ್ಧಿ, ವಾಡಿ; ಸೃಜ, ಸೋಡಿ.

ಅನುಸ್ವಾರಗಳನ್ನು ಇಲ್ಲದ್ದಲ್ಲಿ ಹಾಕುವರು - ಅರಿಷ್ಟ, ರಿಂಟೊ; ಉಚ್ಚ, ಊಂಚ; ಕುಕ್ಕುಟ ಕುಂಕಡ; ತ್ರುಟ, ಥುಂಟಈ; ದೃಷ್ಟ, ಧಿಂಡೊ; ಪ್ರೋತ, ಬೊಂತೊ; ವಕ್ರಿತ, ವಾಂಕಡೆ; ವ್ಯಾವೃತಿ, ವ್ಹಾಂಟಿ.

ಕವರ್ಗಾಕ್ಷರಗಳಲ್ಲಿ ಒಂದರ ಬದಲಾಗಿ ಇನ್ನೊಂದು ಬರುವುದು. -ಕ್ರಯಿಕ, ಗಿರಾಕಿ ; ಖಂಡ,ಕಾಂಡಿ ; ನಿಷ್ಕ ನಗ (ಅಭರಣ); ವ್ಯಾಖ್ಯಾನ ,ವಾಕ್ಕಣ;

---
*ಈ ಲೇಖ ದೊರೆತಿಲ್ಲ.

ಸಕಲ, ಸಗಳೆಂ.

ಚವರ್ಗಾಕ್ಷರಗಳೂ ಶ,ಷ ಕಾರಗಳೂ ಒಂದಕ್ಕೊಂದು ಬರುವುದು. ಕಚ್ಛ ಕಾಸು; ಕಚ್ಛಪ, ಕಾಸವು ; ಗುಚ್ಛ, ಘೊಸೊ ; ಛತ್ರ, ಸಾತ್ತೆಂ; ಛಿಕ್ಕಾ, ಸಿಂಕ; ಸ್ರುವ, ಚೀಪ; ಸಮಾಶ್ವಾಸ. ಸಮಜಾಣಿಶಿ. ಸೋಡ ಶಬ್ದವು ಸಂಸ್ಕೃತ ಛರ್ದ್ ಧಾತುವಿನಿಂದ ಬಂತೆಂದು ಕೆಲವರ ಮತ. 'ಛಡಇ ಮುಂಚತಿ' ಹೇಮಚಂದ್ರ. ಆದರೆ ಈ ಧಾತುವಿಗೆ ವಮನ, ವಾಂತಿ ಎಂಬ ಅರ್ಥವನ್ನು ಶ್ರೀಮಾನ್ ಆಪಟೆಯವರು ತಮ್ಮ ಸಂಸ್ಕೃತ ನಿಘಂಟಿನಲ್ಲಿ ಹೇಳಿರುವುದರಿಂದ ನಾನು ಬೇರೆ ಮತವನ್ನು ಅವಲಂಬಿಸಿದ್ದೇನೆ.

ಟವರ್ಗಾಕ್ಷರಗಳಲ್ಲಿ ಒಂದಕ್ಕೊಂದು ಬರುವುದು - ಕೀಟ, ಕೀಡೊ;ಘೋಟ, ಫೋಡೊ, ಪೋಡೂ; ಚೇಟ, ಚೇಡೊ; ದಂಷ್ಟ್ರಾ, ದಾಡಿ; ಭಾಡಿ, ಭಾಡೆಂ; ವಟಕೊಕ, ವಡೊ; ವೀಟಿ, ವೀಡಿ ; ವೇಣಿ, ವೊಟೊ.

ತವರ್ಗಾಕ್ಷರಗಳ ಬದಲಾಗಿ ಟವರ್ಗಾಕ್ಷರಗಳು - ಆ ನೇತ್ರ ಅಣ್ಣಾ ;ಕ್ವಥ ಕ್ವಾಥ, ಕಡ ಇ, ಕೊದ್ದೆಲ; ಕ್ಷುದ್ರ , ಗುಡ್ಡೊ; ಗಾಂತ್ರೀ, ಗಾಡಿ ; ಗೋಮತ್, ಗೊಮಟೆಂ = ಸುಪ್ರಭ ; ತನ್, ತಾಣಚೆಂ ; ಪತನ, ಪಡಚೆಂ; ಪಾತಿತ, ಪಾಡ, ಪಾದಾಂಗದ, ಪಾದಾಂಗ ; ಪೋತ, ಪೆಟ್ಟೊ; ಮಧ್ಯದ್ರುಮ, ಮಾಡ್ಡೊ; ಸಕೃತ, ಸಕಟ; ಸ್ಥಗ, ಧಾಂಕಚೆಂ"ಥಕ್ಕ ಇ ಛಾದಯತಿ"-- ಹೇಮಚಂದ್ರ.

ಪವರ್ಗಾಕ್ಷರಗಳಲ್ಲಿ ಒಂದಕ್ಕೊಂದು ಬರುವುದು - ಉಪವಿಶ, ಬೈಸ;ಪರಿ, ಬರಿ; (ಕಿರಸ್ತಾನ ಭಾಷೆ) ಪ್ರತಿಫಲ, ಬದಲ; ಬುಧ್ನ ,ಪೊಂದ ; ಭಣ್ ಮ್ಹಣ. ಯ,ದ್ಯಗಳ ಬದಲಿಗೆ ಜಕಾರ - ಖದ್ಯೋತ; ಕಾಜ್ಜೋಳೊ; ದ್ಯೂತ; ಕಾರ್ಯ ಜುಗಾರು; ಪೇಯಾ, ಪೇಜ; ಯಜ್ಞೋಪವೀತ; ಜಾನ್ನವೆ; ಯಮಲ, ಜವಳ ; ಯಾತ್ರ ಜಾವ; ಯೂಥಿ, ಜೂಯಿ; ವಿದ್ಯುತ್, ವೀಜು.

ರಕಾರಕ್ಕೆ ಲೋಪ - ಕರ್ಪಟ, ಕಾಪಡ; ಕೂರ್ಪರ, ಕೊಪ್ಪೊರು; ಕ್ಷೇತ್ರಿಯ, ಶೇತ ; ಘೂರ್ಣ, ಘಾಂವ; ಚಕ್ರ; ಚಾಕ ; ಚಂದ್ರ, ಚಂದ; ಜೀರ್ಣ ಜೂನ; ತಕ್ರಂ; ತಾಕ, ; ದರ್ವೀ; ದಾಯಿ ; ನೀಶ್ರೇಣೀ; ನಿಸಣಿ ; ನಿಸ್ರಾವ; ನಿಶೆಂ; ಪ್ರಣ ಆರ್ಯ ಪಣಜೊ ; ಪ್ರನಪ್ತೃ, ಪಣತು ; ಪ್ರಶಸ್ತ; ಪಸಂದ; ಪ್ರಸ್ತರ; ಫಾತ್ತರು ; ಪ್ರಸ್ಥಾಪನ, ಪಾಠವಣಿ ; ಪ್ರಾವೃಷ; ಪಾವಸು ; ಪ್ರೇಷ; ಪೇಟಇ ;

ಭಾರ್ಯಾ, ಬಾಯಿ (ಎ) ; ಭ್ರಮ; ಭೊಂವ ; ಭ್ರಷ್ಟ; ಬಾಟಕಿ ; ಭ್ರಾಷ್ಟ್ರಂ, ಬಾಳ್ಳೆಂ; ವ್ರಜ, ವಜ.

ರಕಾರಕ್ಕೆ ಲಕಾರ - ನಿರೀಕ್ಷಣ, ನಿಲಕಣೆ; ಪರ್ಯಸ್ತ, ಪಲ್ಲಟ; ಹರಿದ್ರಾ, ಹಳದಿ.

ವ ಮತ್ತು ಪವರ್ಗಾಕ್ಷರಗಳು ಒಂದಕ್ಕೊಂದು ಬರುವುದು - ಕರಪತ್ರ ಕರವತು; ಕಪಾಟ; ಕವಡ. ಇಂಗ್ಲೀಷ್ ಕಬ್ಬರ್ಡ್ ಎಂಬುದು ಹಿಂದೂಸ್ಥಾನದ ಭಾಷೆಗಳಲ್ಲಿ ಕಪಾಟ ಎಂದಾಗಿದೆ. ಇದು ಸಂಸ್ಕೃತವಲ್ಲ. ಕಪಾಲಿಕಾ; ಕವಳಿಗಾ; ಗೋಪ; ಗೊವ್ಹೊ; ಜಾಮಾತೃ; ಜಾಂವಇ; ಜೇಮನ; ಜೇವಣ; ತೇವರಿ, ತೇವೇಂಚೆಂ; ದಾಮಾ; ದಾವೆಂ; ವದ್ಯ; ಬದ್ದ; ವರ, ಬರೆಂ; ವಲ್; ಬಳಇ; ವಿತಥ್ಯ, ಪಟ್ಟಿ; ವಿಸಂವದ; ಫಸಇ, ವ್ಯಾಮ; ವಾಂನ; ಸಂವಹ; ಸಾಂಬಇ; ಸಪತ್ನೀ; ಸವತಿ; ಸಪಾದ; ಸವಾಇ; ಸುಪರ್ಣ, ಸವಣೆ.

ಶ,ಷ, ಸ ಮತ್ತು ಳ, ಟ ವರ್ಗಾಕ್ಷರಗಳು ಬಾಯಿಯಲ್ಲಿಒಂದೇ ಸ್ಥಾನದಲ್ಲಿ ಅಥವಾ ಸಮೀಪ ಸ್ಥಾನಗಳಲ್ಲಿ ಹುಟ್ಟುವುದರಿಂದ ಒಂದಕ್ಕೊಂದು ಬರುವುದು - ತುಷ,ತುಸ್ಸು, ; ದಸ್ರ, ದಡ್ಡ; ವಂಶ, ವಾಂಸೊ ; ಶಶ, ಸೊಸೊ ; ಶಪ ಸವ; ಶಲ್ಲಂ ಸಾಲಿ ; ಶಾಲಿಕ, ಸಾಲಿಯಾಂಚೊ ; ಶಣಂ, ಸೊಣ ; ಶುಲ್ಬಂ ಸೂಂಬ ; ಶುಷ್ಕ,, ಸುಕ್ಕೆ; ಶೂರ್ಪ, ಸೂಪ; ಶ್ಯಾಲೀ, ಸುವಳಿ.

ಹಕಾರಕ್ಕೆ ಬೇರೆ ಸ್ವರಗಳು - ಕುಹಕ. ಕುಂಯಿಕಾ; ದುಹಿಂತ್ರ, ಧುವ ; ದೋಹಲ, ದುವಾಳೊ ; ಮೋಹ, ಮೋಗು; ಪ್ರೀತಿಗೂ ಮೋಹಕ್ಕೂ ಇರುವ ತಾರತಮ್ಯವನ್ನು ಮರೆತು ಬಿಟ್ಟು ಕಿರಸ್ತಾನರು 'ಮೊಗಾಚೊ ಎಡಿತರಾನೋ' ಎಂದು ಬರೆಯುತ್ತಾರೆ. ವಿಹೀರ ವಾಯಿಟ.

ಹಕಾರವು ಬೇರೆ ಸ್ವರಗಳಿಗಾಗಿ ಬರುವುದು - ಅಜಗರ, ಹಾರು; ಆಘ್ರಾಹೂಂಗ; ಆನೀ, ಹಾಡಿ; ಆಂದೋಲ ಹಿಂಜಲೊ; ಆಸ್ತರಣ, ಹಾಂತುಳಣ; ಲೂಧಸ್, ಹೂಂಟಿ; ಔತ್ಸುಕ್ಯ, ಹುಸಕೊ ; ಪರಿಧಾನ, ಪರಿಹಾಣ, ಪಯಿರಾಣ; ಮಧು, ಮಹು ಮ್ಹೊಉ; 'ವರಯಿತೋ ಅಭಿನವವರಃ' (ಹೇಮಚಂದ್ರ) ಹೊರಯಿತು; ವರಾಯನ, ಹೊರಾಯಣ, ಹೊರಾಣ; ವರಾದಾಯ. ಮರಾಠಿಯಲ್ಲಿ ವರಾಡ, ಹೊರಡಿಕ; ವಧುಕಾ, ವಹುಕಾ

ವ್ಹಕ್ಕಲ ; ವೃದ್ಧ, ಹೋದ ; ವೈಧೇಯ (ಮರಾಠಿಯಲ್ಲಿ ವೇಢಾ) ಹೆಡ್ಡು.

ಸಂಯುಕ್ತಾಕ್ಷರಗಳಲ್ಲಿ ಒಂದನ್ನು ಬಿಟ್ಟು ಇನ್ನೊಂದನ್ನು ಇಟ್ಟುಕೊಳ್ಳುವುದು: ಕಕ್ಷ, ಖಾಕ್ಕೊ ; ಕಾಣಾಕ್ಷ, ಕಾಣಸೊ ; ಕ್ಷರ-ಸರಚೆಂ; ಘಾರ್ತಿಕ, ಘಾರಿ ; ಚೋಕ್ಷ, ಚೋಕ ; ಧ್ವಾಂಕ್ಷ, ಢೊಂಕ; ಪಕ್ಷ, ಪಕ್ಕಾ; ಪಕ್ವ ಪಾಕ ; ಪುತ್ರ, ಪೋರ ; ಭಕ್ತಂ, ಭಾತ; ವತ್ಸ, ವಾಸರುಂ; ವಲ್ಕಲ, ವಾಗಳೆಂ; ಸಿತ್ಥ ಸೀತ; ಸ್ಖಲಿತ, ಖಾಲಿ ; ಸ್ಥಾಲಂ, ತಾಟ; ಸ್ತೇಷ್ಮ, ಥೇಟ; ಸ್ಫೋಟಾ, ಫೊಂಡೊ.

ನಾನಾ ವಿಧದ ವಿಪರ್ಯಾಸಗಳಿಗೆ ಕೆಲವು ದೃಷ್ಟಾಂತಗಳನ್ನು ಕೊಟ್ಟು ಇಲ್ಲಿಗೆ ಮುಗಿಸುವೆನು.

ಅಜಾನ-- ಆನು ; ಬೃಹತ್ವಿಕಾ-ಬಾಪುಸು; ಭ್ರಾತೃಜಾಯಾ- ಭಾವಜ<br>
ಭಗಿನೀವತ್ಸ - ಭಾಚ್ಚೊ ;<br>
ಮಾತೃಶ್ವಸಾ-ಮಾವಶಿ; ವೈವಾಹಿಕ - ವೇಯು;<br>
ಶ್ವಶುರ - ಸೊಇರೊ; ಕಾಷ್ಟಪಾದುಕಾ- ಖಾಡಾವ ;<br>
ಮಧು ಪೋಳಿಕಾ - ಮುಳುಕ

ಸ್ವದೇಶಾಭಿಮಾನಿ ೩೦--೧೧-೧೯೧೭

## ೮ ಕೊಂಕಣಿಯ ಬರವಣಿಗೆ

ಗ್ರಂಥಸ್ಥವಲ್ಲದ ಕೊಂಕಣಿಯಂತಹ ಭಾಷೆಯನ್ನು ಪ್ರತಿಪಾದಿಸಲು ಸ್ವದೇಶಾಭಿಮಾನಿಗಳು ಪ್ರಕೃತದಲ್ಲಿ ಮೂರು ಕರ್ತವ್ಯಗಳನ್ನು ಕೈಕೊಳ್ಳಬೇಕೆಂದು ನಾನು ಬೇರೆ ಕಡೆಯಲ್ಲಿ ಪ್ರತಿಪಾದಿಸಿದ್ದೇನೆ. ಅವುಗಳನ್ನು ಇಲ್ಲಿ ಕಾಣಿಸಬಹುದು. --(೧) ಮರಾಠಿ ಮತ್ತು ಕರ್ಣಾಟಕ ಪುರಾಣಗಳ ಅರ್ಥಗಳನ್ನು ಕೊಂಕಣಿಯಲ್ಲಿ ವಿವರಿಸುವಂತೆ ಹರಿಕಥೆಗಳಲ್ಲಿಯೂ ಬೇರೆ ಭಾಷೆಗಳ ಪದ್ಯಗಳನ್ನು ಹಾಡಿದರೂ ಹರಿದಾಸರೂ ಶ್ರಾವಕರೂ ಕೊಂಕಣಿ ಮಾತಾಡುವವರಾದರೆ ನಿರೂಪಣವನ್ನು ಆ ಭಾಷೆಯಲ್ಲಿಯೇ ಮಾಡಲು ಪ್ರಯತ್ನಿಸಬೇಕು. (೨) ಭಾಷಾಶಾಸ್ತ್ರದಲ್ಲಿ ಔತ್ಸುಕ್ಯವುಳ್ಳವರು ಕೊಂಕಣಿ ಶಬ್ದಗಳ ವ್ಯುತ್ಪತ್ತಿಯನ್ನು ಕಂಡು ಹಿಡಿಯಬೇಕು. (೩) ಬಂಧು ಮಿತ್ರರು ತಮ್ಮ

ತಮ್ಮೊಳಗೆ ನಡಿಸುವ ಪತ್ರವ್ಯವಹಾರದಲ್ಲಿ ಮಾತೃಭಾಷೆಯನ್ನೇ ಉಪಯೋಗಿಸಬೇಕು. ವ್ಯವಹಾರ ದೃಷ್ಟಿಯಿಂದ ನೋಡಿದರೆ ಗ್ರಂಥಗಳನ್ನೂ ಪತ್ರಿಕೆಗಳನ್ನೂ ಪ್ರಕಟಿಸುವುದು ಕಷ್ಟ ಸಾಧ್ಯವಾದ್ದರಿಂದ ಆ ಕಾರ್ಯವನ್ನು ನಾನು ಇದುವರೆಗೆ ಪ್ರಶಂಸಿಸಲಿಲ್ಲ.

ಕೊಂಕಣಿ ಶಬ್ದಗಳ ವ್ಯುತ್ಪತ್ತಿಯನ್ನು ಕಾಣಿಸಿ ಒಂದು ಪುಸ್ತಕವನ್ನು ಪ್ರಕಟಿಸಿದರೆ ಉಪಯುಕ್ತವಾಗುವುದೆಂದು ನೆನಸಿ ಪರೀಕ್ಷಾರ್ಥವಾಗಿ ಸ್ವರಾದಿ ಶಬ್ದಗಳನ್ನು ಮಾತ್ರ ಒಳಗೊಂಡು ಒಂದು ಭಾಗವನ್ನು ಮುಂಬಯಿಯಲ್ಲಿ ಅಚ್ಚು ಹಾಕಿಸಿದೆ. ಅದು ದೇವನಾಗರಿಯಲ್ಲಿರುವುದರಿಂದ ದಾಕ್ಷಿಣಾತ್ಯರು ಕರ್ಣಾಟಕ ಲಿಪಿಯಲ್ಲಿ ಒಂದು ಪುಸ್ತಕವನ್ನು ಮುದ್ರಿಸಬೇಕೆಂದು ಸೂಚಿಸಿದರು. ಇದು ಈಗ ಸಾಧ್ಯವಲ್ಲದ್ದರಿಂದ ' ಕೊಂಕಣಿಯ ರಹಸ್ಯ' ಗಳ ವಿಚಾರವನ್ನು ದಾಕ್ಷಿಣಾತ್ಯರು ಬಹಳವಾಗಿ ಓದುವ ಈ ಶ್ರೇಷ್ಠ ಪತ್ರಿಕೆಯಲ್ಲಿ ಸ್ವಲ್ಪ ಮಟ್ಟಿಗೆ ಮಾಡಿದೆ.

ಈಗ ಮೂರನೆಯ ವಿಷಯವನ್ನು ಪ್ರಸ್ತಾಪಿಸಲೇ ? ಸ್ವಜಾತಿಯವರು ತಮ್ಮೊಳಗೆ ಪತ್ರ ಸಂವಾದವನ್ನು ಮಾಡುವಾಗ ಲಿಪಿಯ ಬಿಕ್ಕಟ್ಟು ಪೀಡಿಸಲಾರದು. ಬರೆಯುವವರಿಗೂ ಓದುವವರಿಗೂ ಯಾವ ಲಿಪಿ ಚೆನ್ನಾಗಿ ತಿಳಿವುದೋ ಅದನ್ನು ಉಪಯೋಗಿಸಿದರೆ ತೀರಿತು. ಕೊಂಕಣಿಯಲ್ಲಿ ಬೇಕಾದ ಮಾತುಗಳು ದೊರೆಯುವುದಿಲ್ಲವೆಂದು ಆಕ್ಷೇಪಿಸುವವರು ಬೇರೆ ಯಾವ ದೇಶ ಭಾಷೆಯಲ್ಲಿ ಪತ್ರಗಳನ್ನು ಬರೆಯಬಲ್ಲರು? ಆ ಭಾಷೆಗಳಲ್ಲಿ ಇಂಗ್ಲೀಷಿನ ಸಹಾಯವು ಬೇಕಾಗುವುದರ ಕೊಂಕಣಿಯಲ್ಲಿಯೂ ಅನ್ಯ ದೇಶೀಯ ಸೇರಿಸಬಹುದು. ದೇಶಭಾಷೆಗಳನ್ನೇ ತ್ಯಜಿಸುವವರು ಕೊಂಕಣಿಯನ್ನು ಈಡಾಡಬಹುದು. ನಾನು ತಿಳಿದ ಮಟ್ಟಿಗೆ ಕನ್ನಡವಾಗಲಿ ಮರಾಠಿಯಾಗಲಿ ಸಾಕಷ್ಟು ಚೆನ್ನಾಗಿ ಬಲ್ಲವರು ತಮ್ಮ ಮಾತೃಭಾಷೆಯಾದ ಕೊಂಕಣಿಯನ್ನು ಬರೆಯ ಬಲ್ಲವರೇ ಕೊಂಕಣಿಯ ಕೆಲವು ಸ್ವರಗಳಿಗೆ ತಕ್ಕ ಸಂಜ್ಞೆಗಳು ಕನ್ನಡದ ಅಕ್ಷರ ಮಾಲೆಯಲ್ಲಿಯೂ ದೇವನಾಗರಿಯಲ್ಲಿಯೂ ಇಲ್ಲವೆಂಬ ಆಕ್ಷೇಪವನ್ನು ಮರಾಠಿ ತಿಳಿಯದವರ ಕೇಳಿದರೆ ನಗುವರು. ಮರಾಠಿಯನ್ನು ದೇವನಾಗರಿಯಲ್ಲಿ ಬರೆಯುವಾಗ ಚ,ಜ ವರ್ಣಗಳನ್ನು ಸಂದರ್ಭಾನುಸಾರವಾಗಿ ಎರಡು ವಿಧದಲ್ಲಿ ಉಚ್ಚರಿಸುವರು. ಅನುಸ್ವಾರದ

ಸೊನ್ನೆಯನ್ನು ಮ್ ಎಂಬಂತೆ ತುಟಿಗಳನ್ನು ಜೋಡಿಸಿ ಉಚ್ಚರಿಸಬೇಕೆಂತಿಲ್ಲ.

ಗ್ರಂಥಸ್ಥವಲ್ಲದ ಭಾಷೆಯನ್ನು ಆಡುವಂತೆಯೇ ಬರೆಯಬಹುದೆಂದು "ಸ್ವದೇಶಾಭಿಮಾನ" ಲೇಖದಲ್ಲಿ ಹೇಳಿದೆ. ಹಾಗೆಂದರೇನು ? ಕನ್ನಡ ಜಿಲ್ಲೆಯವರು ಸಾವಂತವಾಡಿಯ ಕುಡಾಲಿ ಭಾಷೆಯನ್ನಾಗಲಿ ಕಿರಸ್ತಾನರು ನವಾಯತರ ಭಾಷೆಯನ್ನಾಗಲಿ ಹೀಗೆ ಒಬ್ಬರು ಇನ್ನೊಬ್ಬರ ಭಾಷೆಯನ್ನು ಆಡಲಿಕ್ಕೆ ಯತ್ನಿಸುವುದಾಗಲಿ ಆವಶ್ಯಕವಲ್ಲ. -- ಇದೇ ನನ್ನ ಅಭಿಮತ. ಉಚ್ಚಾರಕ್ಕೂ ಬರವಣಿಗೆಗೂ ಯಾವ ಭಾಷೆಯಲ್ಲಿಯೂ ಹೆಚ್ಚು ಕಡಿಮೆ ಇರಲೇಬೇಕು. ಕನ್ನಡದಲ್ಲಿ " ವಾಸ್ತೇವ ರಾಯ್ರು. ಈಗ್ನೇ ಬರೋರು " ಎಂದು ನುಡಿದರೂ ಹಾಗೆ ಬರೆಯಲಾಗದು. ಮಂಗಳೂರಲ್ಲಿ ಕಿರಸ್ತಾನರು " ಆಂಗ್ ವಿದ್ಯಾನ್ ನಿತಳ್. ಮೊನ್ ಸತ್ಯಾನ್ ನಿತಳ್ " ಹೀಗೆ ಬರೆಯುತ್ತಾರೆ. ಅವರ ಉಚ್ಚಾರವೂ ಹಾಗೆಯೇ ಇರಬಹುದು. ಆದರೆ ಹಿಂದುಗಳು ಮರಾಠಿಯ ರೀತಿಯನ್ನು ಅನುಸರಿಸುವುದೇ ವಾಸಿ. ಮಂಗಳೂರಿನ ಹಿಂದುಗಳು ಪ್ರಕಟಿಸಿದ ಪುಸಕ್ತಗಳಲ್ಲಿ 'ಆಂಗ್ಲ ಉದಕಾನ ಮನ ಸತ್ಯಾನ' ಹೀಗೆ ಬರೆದಿದ್ದಾರೆ. ಇದೇ ಉತ್ತಮ ಮಾರ್ಗ. ಆದರೂ 'ಬಾಲಬೋಧ ಪ್ರಥಮ ಪುಸ್ತಕ ' ವೆಂಬ ಕೊಂಕಣಿ ಪುಸ್ತಕದಲ್ಲಿ ಆಂಗ್‌ಣಾಂತುಂ ಕುಂಕ್‌ಡಾಕ ಎಂದು ಬರೆದು ವ್ಯಂಜನಗಳ ಅಕಾರವನ್ನು ಲೋಪಿಸಿದ್ದಾರೆ. ಶೀಘ್ರೋಚ್ಚರಣದಲ್ಲಿ ಸ್ವರಗಳು ಲೋಪವಾದರೂ ಬರವಣಿಗೆಯಲ್ಲಿ ಲೋಪಿಸಲಿಕ್ಕೆ ಇಂತಹ ಪರಿಷ್ಕೃತ ಭಾಷೆಗಳಲ್ಲಿ ಪ್ರಮಾಣವಿಲ್ಲ. ಅದರಿಂದ ವೃಥಾ ಆಯಾಸಕ್ಕೂ ಸಂದೇಹಕ್ಕೂ ಕಾರಣವಾಗುತ್ತದೆ.

ಇತರ ದೇಶ ಭಾಷೆಗಳನ್ನು ಬರೆಯುವದಕ್ಕಿಂತಲೂ ಕೊಂಕಣೆಯನ್ನು ಬರೆಯುವುದು ಕಷ್ಟವಲ್ಲ. ಆದರೆ ರೂಢಿಯಿಲ್ಲದ ಯಾವದೊಂದು ಕಾರ್ಯದಲ್ಲಿಯೂ ಉಪಕ್ರಮಿಸಬೇಕಾದರೆ ಮನುಷ್ಯನಲ್ಲಿ ನೈಸರ್ಗಿಕವಾದ ಭೀರುತೆಯು ಅಡ್ಡ ಬರುವುದು. ನೂತನ ಆಚರಣವನ್ನು ಕಂಡಕೂಡಲೇ ನಗುವುದು ಅನೇಕರ ಸ್ವಭಾವ. ಹಾಗೆ ನಗುತ್ತಲೇ ಹಿಂದೆಗೆಯುವುದು ಸಾಮಾನ್ಯ ಗುಣ. ಇಂತಹ ಪುಕ್ಕತನವನ್ನು ಬಿಟ್ಟು ವಿವೇಕವನ್ನೇ ಹಿಡಿದು ಸಜಾತಿಯವರೂ ವಿತ್ರವರ್ಗದವರೂ ತಮ್ಮ ಮಾತೃಭಾಷೆಯಲ್ಲಿ ಪತ್ರಸಂವಾದವನ್ನು ನಡಿಸಲಿಕ್ಕೆ ಮೊದಲು ಮಾಡಿದರೆ ಮೊದಲು ಜಗಲಿ ಹಾರಿ ಆಮೇಲೆ ಗಗನ ಹಾರಬಹುದು.

ಸ್ವದೇಶಾಭಿಮಾನಿ ದಿ. ೭-೧೨-೧೯೧೭

## ೯ ಕೊಂಕಣ ಮರಾಠಿಯ ರಹಸ್ಯಗಳು

ಪ್ರಾಕೃತ ಭಾಷೆಗಳಲ್ಲಿ ಮಹಾರಾಷ್ಟ್ರೀಯವೆಂಬುದು ಒಂದು ಜಾತಿ. ಅದರಿಂದ ಈಗಿನ ಮರಾಠಿ ಹುಟ್ಟಿತು. ಇದನ್ನು ಗ್ರಂಥಗಳಲ್ಲಿ ಒಂದೇ ವಿಧವಾಗಿ ಬರೆದರೂ ಆಡುವಾಗ ಒಂದೊಂದು ಪ್ರಾಂತದಲ್ಲಿ ಒಂದೊಂದು ಬಗೆಯಾಗಿ ಆಡುವರು. ಕೊಂಕಣ ದೇಶದಲ್ಲಿ ಪ್ರಚಲಿತವಿರುವ ಪ್ರಾಕೃತಕ್ಕೆ ಕೊಂಕಣಿ ಎನ್ನುವರು. ರತ್ನಗಿರಿಯಲ್ಲಿ ಚಿತ್ತಪಾವನರು ಮರಾಠಿಯ ಹೋಲಿಕೆ ಆದಷ್ಟು ಹೆಚ್ಚಾಗಿರುವ ಒಂದು ಭಾಷೆಯನ್ನಾಡುವರು. ದಕ್ಷಿಣಕ್ಕೆ ಬರುತ್ತ ಬರುತ್ತ ಈ ಹೋಲಿಕೆಯು ಕಡಿಮೆಯಾಗಿ ಗೋವೆಯಲ್ಲಿ ಪೋರ್ಚುಗೀಸ ಶಬ್ದಗಳೂ ಹೈಗ, ತುಳುವ ಮಲೆಯಾಳ ದೇಶಗಳಲ್ಲಿ ದ್ರಾವಿಡ ಪದಗಳೂ ಸೇರುತ್ತ. ಭಾಷೆಯ ರೂಪವು ಇನ್ನೂ ಹೆಚ್ಚಾಗಿ ಬದಲಿಸುತ್ತದೆ. ಕರ್ಣಾಟಕ ವ್ಯಾಕರಣಗಳಲ್ಲಿ ಕಲ್ಪಿಸಿಕೊಂಡಿರುವ ತದ್ಭವ ಸೂತ್ರಗಳನ್ನು ಪ್ರಾಕೃತ ವ್ಯಾಕರಣಗಳಿಂದಲೇ ತೆಗೆದು ಕನ್ನಡಕ್ಕೆ ಸರಿಪಡಿಸಿಕೊಂಡಿದ್ದಾರೆ. ಕೊಂಕಣ ಮರಾಠಿಗರೂ ಹಾಗೆಯೇ ಸೂತ್ರಗಳನ್ನು ಬರೆಯಬಹುದು. ಸಂಸ್ಕೃತ ಕಾವ್ಯಗಳಲ್ಲಿ ಪ್ರಸಿದ್ಧವಲ್ಲದ ವಾಚಕಗಳಿಗೆ ಪೂರ್ವಿಕರು ದೇಶೀಯ ಎನ್ನುತ್ತಿದ್ದರು. ಇವುಗಳನ್ನು ಸಂಗ್ರಹಿಸಿ ಹೇಮಚಂದ್ರನು ಹದಿನೆರಡನೆಯ ಶತಮಾನದಲ್ಲಿ ಒಂದು ಕೋಶವನ್ನು ಬರೆದನು. ಇಂತಹ ಗ್ರಂಥಗಳಲ್ಲಿ ಅನೇಕ ಕೊಂಕಣಿ ನಾಮಗಳ ಪೂರ್ವರೂಪಗಳು ಕಣ್ಣಿಗೆ ಬೀಳುತ್ತವೆ. ಅಲ್ಲಿಯೂ ಸಿಕ್ಕದ ವಾಚಕಗಳ ಮೂಲವನ್ನು ಕಂಡು ಹಿಡಿಯುವುದು ದುಃಸಾಧ್ಯವಾದರೂ ಸರ್ವಥಾ ಅಸಾಧ್ಯವಲ್ಲ. ಉದಾಹರಣಕ್ಕೆ ಉಡಗಾಸು ಅಥವಾ ಉಗಡಾಸು. ಇದು ಮರಾಠಿಯಲ್ಲಿಯೂ ಇಲ್ಲ. ಸಂಸ್ಕೃತಕ್ಕೆ ಚೆನ್ನಾಗಿ ಹೋಲುವುದೂ ಇಲ್ಲ. ಇದರ ರಹಸ್ಯವನ್ನು ಊಹಿಸಲಿಕ್ಕೆ ನಾನು ಸರ್ವ ಪ್ರಯತ್ನಗಳನ್ನೂ ಮಾಡಿ ತಲೆ ಸಿಡಿತ ಹಿಡಿದು ಅಸಾಧ್ಯವೆಂದು ಬಿಟ್ಟುಬಿಡುವಾಗ ದೈವವಶಾತ್ ಒಂದು ದಿನ ಚಿಲ್ಡರ್ಸ್ ಪಾಲಿ ಇಂಗ್ಲಿಷ್ ನಿಘಂಟಿನಲ್ಲಿ ಉಗ್ಗಹಣ, ಸಂಸ್ಕೃತದಲ್ಲಿ ಉದ್ಗ್ರಹಣಂ ಮನಸ್ಸಿನಿಂದ ತೆಗೆದು ಇಟ್ಟುಕೊಳ್ಳುವುದು - ಎಂಬ ವ್ಯಾಖ್ಯಾನವು ಕಂಡು ಬಂತು. ಕೂಡಲೇ ಆ ನಿಘಂಟಿನನ್ನು ತೆರೆದು ನೋಡಲು ಅದರಲ್ಲಿ ಉದ್ಗ್ರಹಿತ ಶಬ್ದಕ್ಕೆ ಸ್ಮೃತ ಎಂಬುದನ್ನು ಆರನೆಯ ಅರ್ಥವಾಗಿ ಕೊಟ್ಟದ್ದು ಸಿಕ್ಕಿತು. ಈಗ

ಸಂದೇಹವೇನು? ಉದ್ಗ್ರಹಣ ಶಬ್ದದಲ್ಲಿ ಪ್ರಾಕೃತದಲ್ಲಿ ಬಂದಂತೆ ವಿಪರ್ಯಯಗಳು ಹುಟ್ಟಿ ಮರಾಠಿಯಲ್ಲಿಯೂ ಇರುವ 'ಆಸು' ಪ್ರತ್ಯಯದ ಸಂಯೋಗದಿಂದ ಉಗ್ಗಹಣಾಸು, ಉಗಡಾಸು ಆಯಿತೆಂದು ಹೊಳೆದು ಸ್ಪಷ್ಟವಾಯಿತು.

ಇಂತಹ ವಿಚಾರಗಳು ಪ್ರಾಯಶಃ ಪಂಡಿತರಿಗೇನೇ ಪ್ರಿಯವಾದರೂ ಸ್ವಭಾಷೆಯಲ್ಲಿ ಅಭಿಮಾನವನ್ನು ಹುಟ್ಟಿಸುವುದಕ್ಕೆ ನಮ್ಮ ಶರೀರದ ಕೆಲವು ಅವಯವಗಳಿಗೆ ವ್ಯುತ್ಪತ್ತಿಯನ್ನು ಹೇಳಿದರೆ ಅನೇಕ ವಾಚಕರು ರಚಿಸುವರೆಂದು ನಂಬಿದ್ದೇನೆ.

೧ ಮಾತ್ತೆಂ ಮಸ್ತಂ ೨. ಶೆಂಡಿ, ಶಿಖಂಡಿಕಾ - ಛೆಂಡಶಿಖಾ (ಹೇಮ) ೩ ಘಾಂತಿ ಪಂಕ್ತಿಕಾ - ಪಂತೀವೇಣಿ (ಹೇಮ) ೪ ಮಾನ - ಮಾನ್ಯಾ ೫ ಕಾಣಸಳ - ಕರ್ಣಸ್ಥಲ ೬. ನಿಡಳ - ನಿಟಲ ೭. ಭೋವಿ - ಭ್ರೂ ೮. ದೊಳೊ - ದೃಶಾ - ಡೋಲೊಲೋಚನಾ (ಹೇ) ೯. ಪಾತ್ತಿ - ಪತ್ರಂ ೧೦. ನಾಕ ನಕ್ರಂ ಣಕ್ಕೊಘ್ರಾಣಂ (ಹೇ) ೧೧ ಪೊಡ - ಪುಟಂ ೧೨. ಓಟು - ಓಷ್ಠ ೧೩. ವಾಳುವ ಓಷ್ಠಪಲ್ಲವಂ ಅವಾಲುವಾಓಷ್ಠಜಾರಂ (ಹೇ) ೧೪. ಪೊಲ್ಲೊ, ಪಲಾಪ ೧೫.ಮೀಶಿ, ಶ್ಮಶ್ರು ೧೬. ಖಾಡಕೂರ್ಚಂ ಅಥವಾ ಕೇಸರಂ. ಖಡಂ ಶ್ಮಶ್ರು. ಹೇ ೧೭. ಕೊಪ್ಪೊರು. ಕೂರ್ಪರ ೧೮. ಉಜವ್ಲೊ - ಅಪಸವ್ಯ ೧೯. ದಾವೊ - ಸವ್ಯ 'ಡಾವೊ ನಾಮಕರ' (ಹೇ) ೨೦. ಉಂಗುಟಿ - ಅಂಗುಷ್ಠ ೨೧. ಬೋಟಿ, ಬಾಹುಸ್ಥ. ಕನ್ನಡದಲ್ಲಿ ಬೆಟ್ಟು. ಇದರ ವ್ಯುತ್ಪತ್ತಿ ಎಲ್ಲಿಯೂ ಸಿಕ್ಕಲಿಲ್ಲ. ಆದರೆ ಅಂಗುಷ್ಠಕ್ಕೆ 'ಅಂಗೌ ಪಾಣೌ ಪ್ರಧಾಸ್ಯೇನ ತಿಷ್ಠತಿ ಅಂಗುಸ್ಥಾ, ಎಂದು ಹೆಸರಿತ್ತೆಂದು ನನ್ನ ಊಹೆ ೨೨. ನಾಕುಂಟ - ನಕರಂ ೨೩. ಘಾಟಿ - ಪೃಷ್ಠಂ ೨೪.ಪೋಟ, ಪ್ರಕೋಷ್ಠ. ಪ್ರಾಕೃತದಲ್ಲಿ ಪಒಟ್ಟ 'ಪೊಟ್ಟಂ ಉದರಂ' -- ಕೋಷ್ಠ ಶಬ್ದಕ್ಕೆ ಹೊಟ್ಟೆ ಎಂಬ ಅರ್ಥವಿದ್ದರೂ ಪ್ರಕೋಷ್ಠಕ್ಕೆ ಈ ಅರ್ಥವು ಪ್ರಸಿದ್ಧವಲ್ಲದ್ದರಿಂದ ಇದನ್ನು ದೇಶೀ ನಾಮಗಳಲ್ಲಿ ಹೇಮಚಂದ್ರನು ಸೇರಿಸಿರಬಹುದು. ೨೫. ಬಾಂದಣ; ಬುಧ್ನ ೨೬. ಹಾರಡಿ, ಹೃತ್ರಚೀ ೨೭. ಕುಲ್ಲೊ - ಕೋಲ ೨೮. ಕೂಲಟು - ಕೋಲತಟಂ ೨೯. ಧಿಂಬಿ ; ಮರಾಠಿಯಲ್ಲಿ ಢೋಂಪಾ; ಅರ್ಧಂ ಪಾದ, ಕಾಲಿನ ನಡುವಿನ ಭಾಗ - ಹೀಗೆ

ವ್ಯುತ್ಪತ್ತಿಯಿರಬಹುದು. ಡಿಂಬ ಶಬ್ದಕ್ಕೆ ಗೋಲಾರ್ಧವಿರುವುದರಿಂದ ಅದರಿಂದ ಹುಟ್ಟಿರಲೂಬಹುದು. ೩೦. ಪೊಟರಿ, ಪಾದೋತ್ತರಿ. ಕಾಲಡಿಯ ಮೇಲಕ್ಕಿರುವ ಭಾಗ ಎಂದಿರಬಹುದು ೩೧. ಖುಳು, ಖುಲು ಹೋಗಲ, (ಹೇ) ೩೨. ಹಾಡ, ಹಡ್ಡಂ ಅಸ್ಥಿ (ಹೇ). ಇಂದು ಇಲ್ಲಿ ಮುಗಿಸುವೆನು.

ಸ್ವದೇಶಾಭಿಮಾನಿ ದಿ ೧೬--೧೧-೧೯೧೭

## ೧೦. ಕೊಂಕಣಚೊ ಮೂಲಾದರ್ಶು

ಕೊಂಕಣಿ ಶಬ್ದ ಸಂಸ್ಕೃತಾಥಾ ಉನು ಕಶೆ ಆಇಲೆ -ಹೇ ಸಾಂಗಚೆ ಪುಸ್ತಕ

An Etymological Glossary of Southern Konkani

(ಕೊಂಕಣಿ ಭಾಷೆಯ ಈ ಪುಸ್ತಿಕೆಯ ಸಾರವನ್ನು ಮಾತ್ರ ಕನ್ನಡದಲ್ಲಿ ಕೊಡಲಾಗಿದೆ. ಕೆಲವೊಂದು ಅಂಶಗಳು ಪರೋಕ್ಷವಾಗಿ ಹಿಂದಿನ ಲೇಖನಗಳಲ್ಲಿ ಬಂದಿವೆ. ಪ್ರಕೃತದ ಈ ಸಾರವನ್ನು ನಮಗಾಗಿ ಬರೆದು ಕೊಟ್ಟವರು ಮಂಗಳೂರಿನ ಶ್ರೀ ಬಿ.ವಿ. ಬಾಳಿಗಾ ಅವರು. -ಸಂ.)

ಅಶಿಕ್ಷಿತ ಜನರು ಒಂದು ಭಾಷೆಯನ್ನು ಆಡುವಾಗ ಒಂದು ಶಬ್ದದಲ್ಲಿರುವ ಸ್ವರ ಬಿಟ್ಟುಬಿಡುತ್ತಾರೆ; ಇಲ್ಲದ್ದನ್ನು ತರುತ್ತಾರೆ; ಸಂಯುಕ್ತಾಕ್ಷರಗಳನ್ನು ಬೇರ್ಪಡಿಸುತ್ತಾರೆ; ಬೇರೆ ಬೇರೆ ಇದ್ದ ಅಕ್ಷರಗಳನ್ನು ಜೋಡಿಸುತ್ತಾರೆ; ಒಂದು ಸ್ವರದ ಬದಲು ಇನ್ನೊಂದನ್ನು ಹಾಕುತ್ತಾರೆ. ಈ ಕ್ರಿಯೆ ನಡೆದುಹೋದಂತೆ ಆ ಭಾಷೆಯ ರೂಪವೇ ಬದಲಾಗುತ್ತದೆ. ಈ ಕಾರಣದಿಂದಾಗಿಯೇ ಸಂಸ್ಕೃತ ಮತ್ತು ಪ್ರಾಕೃತಗಳಲ್ಲಿ ಭೇದ ಉಂಟಾಯಿತು. ಪ್ರಾಕೃತದಿಂದ ಕೊಂಕಣಿ, ಮರಾಠಿ, ಗುಜರಾಥಿ, ಹಿಂದಿ, ಬಂಗಾಳಿ ಇತ್ಯಾದಿ ಭಾಷೆಗಳು ಹುಟ್ಟಿದುವು. ಕೊಂಕಣಿ ಭಾಷೆಯಲ್ಲೂ ಭೇದಗಳುಂಟಾದುವು.

ಕೊಂಕಣಿಯ ಚರಿತ್ರೆ ತಿಳಿಯಬೇಕಾದರೆ ಪ್ರಾಕೃತ ವ್ಯಾಕರಣವನ್ನು ಓದುವುದು ಅಗತ್ಯ. ಇಂಗ್ಲಿಷ್ ಭಾಷಾ ಶಾಸ್ತ್ರ ಒಂದಿಷ್ಟು ತಿಳಿದಿದ್ದರೆ ಇನ್ನಷ್ಟು ಉತ್ತಮ. ಸಂಸ್ಕೃತ ಮಾತ್ರವಲ್ಲ, ಇತರ ಹಲವು ಭಾಷೆಗಳನ್ನು ಹಿಂದೂಸ್ಥಾನದಲ್ಲಿ ಬಹುತೇಕ ಜನರು ಆಡಿಕೊಂಡಿದ್ದರು. ಆ ಭಾಷೆಗಳ ಶಬ್ದಗಳು ಸಂಸ್ಕೃತ ಪ್ರಾಕೃತ ಇವೆರಡರಲ್ಲೂ ಸೇರಿ ಹೋದುವು. ಹೀಗೆ ಪ್ರಾಕೃತದಲ್ಲಿ ತತ್ಸಮ, ತದ್ಭವ, ದೇಸಿ ಹೀಗೆ ಮೂರು ಜಾತಿಯ ಶಬ್ದಗಳಿದ್ದವು. ಕೊಂಕಣಿ ಭಾಷೆಯಲ್ಲಿ ಇತ್ತೀಚೆಗೆ ಕರ್ನಾಟಕ ದೇಶೀ ಮತ್ತು

ಅರಬಿ, ಫಾರ್ಸಿ ಇತ್ಯಾದಿ ಅನ್ಯದೇಶೀ ಶಬ್ದಗಳ ಪ್ರವೇಶವಾಗಿದೆ. ಹೇಮಚಂದ್ರನ ದೇಶೀರತ್ನಾವಲಿಯಲ್ಲಿ ಕೊಟ್ಟಿರುವ ಹೆಚ್ಚಿನ ಶಬ್ದಗಳು ಯಾವ ಭಾಷೆಯಿಂದ ಬಂದವುಗಳು ಎಂಬುದನ್ನು ಹೇಳಬರುವುದಿಲ್ಲ. ಹೀಗಿರುವಾಗ ಕೊಂಕಣಿಯಲ್ಲಿಯ ಸರ್ವ ಶಬ್ದಗಳ ವ್ಯುತ್ಪತ್ತಿ ಹೇಳುವುದು ಅಸಾಧ್ಯ.

ಆಧ್ಯಾತ್ಮಿಕ, ಶಾಸ್ತ್ರಿಕ, ಐತಿಹಾಸಿಕ ಇತ್ಯಾದಿ ವಿಷಯಗಳ ಕುರಿತು ಮಾತನಾಡುವಾಗ ನಾವು ಉಪಯೋಗಿಸುವ ಶಬ್ದಗಳು ಪ್ರಾಯಶಃ ತತ್ಸಮಗಳು. ಗೃಹಕೃತ್ಯ, ಕೃಷಿ, ವಾಣಿಜ್ಯ ಇತ್ಯಾದಿ ವಿಷಯಗಳ ಕುರಿತು, ಹೆಂಗಳೆಯರು ಮತ್ತು ಇತರರು ಮಾತನಾಡುವಾಗ ತದ್ಭವಗಳ ಉಪಯೋಗ ಹೆಚ್ಚುತ್ತದೆ. ಕರ್ನಾಟಕ ದೇಶದಲ್ಲಿ ಆ ಭಾಷೆಯ ಶಬ್ದಗಳನ್ನು ಹೆಕ್ಕುವುದು ಸಹಜವೆನಿಸಿತು. ಮುಸಲ್ಮಾನರ ರಾಜ್ಯಗಳಲ್ಲಿ ಅನ್ಯ ದೇಶೀ ಶಬ್ದಗಳ ಉಪಯೋಗ ಅನಿವಾರ್ಯವಾಯಿತು. ಆದರೆ ಸಂಸ್ಕೃತ ತತ್ಸಮ, ಕರ್ನಾಟಕ ಮತ್ತು ಅನ್ಯ ದೇಶೀ ಶಬ್ದಗಳನ್ನು ಆಯಾಯ ಭಾಷೆಯ ನಿಘಂಟುಗಳಲ್ಲಿ ನೋಡಬಹುದು. ಇಲ್ಲಿ ಅದನ್ನು ಕೊಟ್ಟಿಲ್ಲ. ತದ್ಭವ ಶಬ್ದಗಳ ಮೂಲ ಶೋಧನೆಗೆ ಮಾತ್ರ ಇಲ್ಲಿ ಆದ್ಯ ಗಮನ ಕೊಡಲಾಗಿದೆ. ಇಂತಹ ಶಬ್ದಗಳ ಸಂಖ್ಯೆ ಕಡಿಮೆ ಇರುವುದರಿಂದ ಈ ಪುಸ್ತಕದ ಗಾತ್ರ ಬೆಳೆಯಲು ಕಾರಣವಿಲ್ಲ. ಇದು ಕೊಂಕಣಿಯ ಸಂಪೂರ್ಣ ನಿಘಂಟ ಅಲ್ಲ.

ಕೊಂಕಣಿ ಭಾಷೆ ಒಂದೊಂದು ಜಾತಿಯಲ್ಲಿ, ಒಂದೊಂದು ಪ್ರಾಂತದಲ್ಲಿ ಒಂದೊಂದು ರೀತಿಯಲ್ಲಿ ಮಾತನಾಡುತ್ತಾರೆ. ಈ ಚಿಕ್ಕ ಪುಸ್ತಕದಲ್ಲಿ ಸಂಸ್ಕೃತ ಮತ್ತು ಮರಾಠಿಯ ರೀತಿ ನೋಡಿ ಯುಕ್ತಕಂಡ ಮಾರ್ಗ ಅನುಸರಿಸಿದೆ. ಭಾಷೆಯ ಅಭಿಮಾನ ಉಳ್ಳವರಿಗೆ ಅದರ ಚರಿತ್ರೆ ತಿಳಿಯುವ ಅಭಿಲಾಷೆ ಸಹಜವಾಗಿ ಇರುತ್ತದೆ. ಈ ಮನೋರಥ ಪೂರೈಸುವುದೇ ಈ ಪುಸ್ತಕ ಪ್ರಕಟಿಸಿದುದರ ಉದ್ದೇಶ. ಆದರೆ ಈ ಪುಸ್ತಕ ಎಷ್ಟುಮಂದಿಗೆ ಪ್ರಿಯವಾದೀತು ಎಂಬುದನ್ನು ತಿಳಿಯದೆ ಸದ್ಯ, ಸ್ವರಾದಿ ತದ್ಭವಗಳ ಮೂಲ ಮಾತ್ರ ಇಲ್ಲಿ ಹೇಳಿರುತ್ತದೆ.

ಪುಸ್ತಕದ ಆರಂಭದಲ್ಲಿ ತದ್ಭವ ಶಬ್ದಗಳ ಉಪಸರ್ಗ ಮತ್ತು ವಿಶಿಷ್ಟ ಪ್ರಯೋಗಗಳ ಸಂಕ್ಷಿಪ್ತ ಮಾಹಿತಿ, ಆ ಮೇಲೆ ಪ್ರತ್ಯಯಗಳ ಕುರಿತು ಉಲ್ಲೇಖಿಸಿದ್ದಾಗಿದೆ. ಪ್ರತ್ಯಯಗಳಲ್ಲಿ ಕೂಡಾ ಲಿಂಗವಚನ ವಿಭಕ್ತಿ ಇತ್ಯಾದಿಗಳ ಪ್ರತ್ಯಯಗಳನ್ನು ಮಾತ್ರ ಕೊಟ್ಟಿರುತ್ತಾರೆ. ಪ್ರಸ್ತಾವನಾ ರೂಪದಲ್ಲಿ ಉಪಸರ್ಗ, ಪ್ರತ್ಯಯಗಳನ್ನು ಕೊಟ್ಟಿದೆ. ನಂತರ ಸಂಸ್ಕೃತದಿಂದ ಕೊಂಕಣಿ

ಶಬ್ದಗಳ ವ್ಯುತ್ಪತ್ತಿಯನ್ನು ನಿರೂಪಿಸುವಾಗ ಆಪ್ಟೆಯವರ ಸಂಸ್ಕೃತ ಇಂಗ್ಲಿಷ್ ನಿಘಂಟುವಿನ ಅರ್ಥವನ್ನು ಕೊಂಕಣಿಯಲ್ಲಿ ಕೊಟ್ಟಿರುತ್ತಾರೆ. ಪಾಲಿ ಇಂಗ್ಲಿಷ್ ನಿಘಂಟು, ಪ್ರಾಕೃತ ಶಬ್ದಕಲ್ಪದ್ರುಮ, ಹೇಮಚಂದ್ರನ ದೇಶೀ ರತ್ನಾವಲೀ ಮತ್ತು ಅದರ ವ್ಯಾಪ್ತಿ ಅವಶ್ಯವಿದ್ದಲ್ಲೆಲ್ಲಾ ಕೊಟ್ಟಿದೆ. ಕೊನೆಯಲ್ಲಿ ಫಾ.ಮಾಫೆಯವರ ನಿಘಂಟುವಿನ ಕೆಲವು ಶಬ್ದಗಳು, ಕರ್ನಾಟಕದಿಂದ ಕೊಂಕಣಿಗೆ ಸೇರ್ಪಡೆಯಾದ ಕೆಲವು ಶಬ್ದಗಳು, ಕೊಂಕಣಿಯಲ್ಲಿ ಸೇರಿಹೋದ ಅನ್ಯದೇಶೀ ಶಬ್ದಗಳು ಇವುಗಳ ಉಲ್ಲೇಖವೂ ಇದೆ.

**ಪೂರಕ ವಿಷಯ**

ಈ ಕೊಂಕಣಿ ಪುಸ್ತಕದ ಕಡೆಯಲ್ಲಿ (ಪು ೧೫) ಕೆಲವು ಸ್ವರಾರಂಭದ ಕೊಂಕಣಿ ಶಬ್ದಗಳನ್ನು ಕೊಟ್ಟು ಅವುಗಳ ಮೂಲರೂಪ ಕನ್ನಡದೆಂದು ಹೇಳಿದ್ದಾರೆ.

ಅಗಳು ಅಡನಾಡಿ ಅಡವು ಅಡಿ ಅಣೆ ಅಂಟು
ಅಂಡೊ ಅದರುವಚೆ ಅದುರುವಿಕೆ ಅಂದು ಅಪನಂಬಿಕ ಅರ್ತಿ
ಅಳುಕ ಆಂಗಡಿ ಆಡಳಿತಾ ಇದುರ ಇಂಬು
ಈಳಿ ಉದುರುವಚೆ ಉಲುಕು (ವಳಕು) ಉಳಿಗ
ಊಳಿ ಎಡೆ ಏಳೊ ಒಕ್ಕಲ ಒಗ್ಗುವಚೆ
ಒಟ್ಟು ಒತ್ತು ಒತ್ತಾಯ ಒತ್ತರಿ ಒದಗುವಚೆ
ಒರೆ ಒರೆಕಲ್ಲು ಒಸಗೆ (ಹೊಸಗೆ) ಇತ್ಯಾದಿ

ಇನ್ನು ಎರಡನೆಯ ಭಾಗವಿರುವ ಪುಸ್ತಿಕೆಯಲ್ಲಿ ನಮ್ಮ ಶರೀರ, ಶಾರೀರಕ ಕಾರ್ಯ, ಕುಟುಂಬ, ಅಡಿಗೆ, ಊಟ, ವಸ್ತ್ರಾಭರಣ ಶಬ್ದಗಳನ್ನು ಕೊಟ್ಟು ಅವುಗಳ ಮೂಲವನ್ನು ಗುರುತಿಸುವ ಯತ್ನ ಮಾಡಿದ್ದಾರೆ. -ಸಂ.

# 11. ETYMOLOGICAL RESEARCH IN KANARESE AND MARATHI

In December 1851 and August 1852 the Rev. Dr. Stevenson presented to this Society a couple of papers on the Non-Sanskrit vocables in the Vernaculars of India. Since then comparative Philology has advanced by rapid strides, and etymology has been reduced to a science. In 1856 Caldwell Published his famous Grammar of the Dravidian Languages which placed Kanarese in one family and Marathi in another. Old Marathi writers have used the word 'Kanade' in the sense of 'barbarous' or 'unintelligible' but a large number of parakrit words are common to both languages and few Dravidian vocables have found thier way into Marathi. In his Kanarese- English Dictionary Kittel has noticed many Marathi cognates but no etymological dictionary of marathi has yet been published and he made no systematic attempt to trace the prakrit words to their origin.

Etymology is no longer mere guess work and arbitrary suggestion. The first canon laid down by professor Skeat is that before attempting the etymology of a word, its earliest form and use must be ascertained. The danger of neglecting this precaution is illustrated by several of Dr. Kittel's derivations. Thus the Kanarese 'Kattu', bind or construct is Dravidian and therefore he thought that 'acchukattu', excellent, was also Dravidian . A reference to Childers' Pali Dictionary would have shown that it is a tadbhava of the sanskrit 'atyutkrshta'. For the origin of terms

common to Marathi and Kanarese we must often search Prakrit and old Marathi literature on the one hand and the Dravidian languages on the other. The quickest and most satisfactory results would be attained by co-operation between scholars who have made a special study of the languages concerned.

Prakrit words must have begun to enter the speech of the Dravidians ever since they came into contact with the northerners. From geographical considerations one may surmise that the Karnatakas of this Presidency had a larger share in the affiliation of Prakrit or Marathi words than the southerners.

In Kanarese more than a thousand tadbhavas have been noticed by grammarians and others. yet the words that defy analysis are by no means few. Hemachandra's collection of Deshi words is of much interest to etymologists. I have found in it about 150 Kanarese vocables, a very large number of which are also Marathi . Hemchandra's 'Deshi' is not synonymous with non-Sanskrit or Dravidian. It means a provinicial expression. Words like akka, atta, tamarasa, timingila are admittedly tatsamas, but are classed as Deshi becasue they are used in altered sense in provincial dialects. Similarly a number of words which are included in modem Sanskrit dictionaries were classed as Deshi by Hemachandra, apparently because he thought that their usage in standard literature was restricted.

ಇಲ್ಲಿ ಹೇಮಚಂದ್ರನ ಕೆಲವು 'ದೇಶೀ' ಶಬ್ದಗಳನ್ನು ಅವುಗಳ ಮರಾಠಿ ಮತ್ತು ಕನ್ನಡ ರೂಪಗಳ ಸಹಿತ ಕೊಟ್ಟಿದ್ದಾರೆ. ಅವು ಹಿಂದಿನ ಲೇಖನದಲ್ಲಿ ಬಂದಿವೆ. -ಸಂ.

Hemachandra's Deshi - namamala includes a few anyadeshi words. It is not clear whether he was aware of their origin which in some cases might have been concealed by thier resemblance in sound and sense to current local terms. Thus 'badal' is said tobe an Arabic word. Hemachandra's 'utthallapatthalla' is evidently our 'adalabadala' . The first part of the compound appears to be a reduplicate, while the spelling of the second suggests that it might have been preceded by a Prakrit vocable derived from Sk. Prati. Perhaps no other foreign word has obtained wider currency than this.

It is well known that certain number of Dravidian words have been adopted into sanskrit as well as the Prakrits. Caldewell , Gundert and Kittel have made a diligent search for them, and the list has already reached to portentous figure 420. I am not sure how many of these will stand the tests of scientific etymology. For example 'puja' worship has been derived from the Dravidian 'pusu' - to rub or smear because smearing with a fragrant substance is one of the ways of showing veneration. We are not told how old the Sanskrit word is and whether smearing was associated with worship at the time when the Dravidian vocable is alleged to have been borrowed. The Sanskrit 'pronchhana' appears to be the same word as the Mhr 'pusane' rubbing off, or wiping, Hemchandra classes this is Deshi and gives its meaning as 'Marshti' cleansing. In Kn. neither 'pusu' nor any of its derivatives means worship. On the other hand the suffix 'isu' is added to the Sanskrit root'puj' in order to make the verb 'pujisu' to worship. Marathi scholars have

acknowledged the existence of the several Dravidian vocables in their langugage and further research may bring to light several more. I conclude by expressing the hope that the study of the Prakrits which has received a fresh impetus in this presidency may bear fruit in the shape of etymological dictionaries in the vernaculars.

*Journal . Bombay of the Royal Asiatic vol. 25(1921)pp. 491-497*

(ಇದರಲ್ಲಿ ಬಂದ ಲೇಖದಲ್ಲಿ ಕೆಲ ಭಾಗಗಳನ್ನು ಬಿಟ್ಟಿದೆ. ಕನ್ನಡ ಲೇಖಗಳಲ್ಲಿ ಈಗಾಗಲೇ ಬಂದಿದ್ದ ಕಾರಣದಿಂದ. -ಸಂ)

## 1. The faith of the Age

(Tracts for thinkers No.5)

All of us wish to be happy and seek to know who and what will help or harm us. The world around is full of manifestations of energy. Fire and wind, the sun and the clouds are sources of blessings and sometimes also of disaster. If talking bipeds like oursleves are animated by a thinking priniciple called the spirit, why should not the inarticulate processses of nature be directed by similar agencies? The existence of such appeared probable to mankind and the world was peopled with deities. But the philosophers perceived that the forces of nature are so interrelated that the universe may be treated as one stupendous whole, animated by one directing Intelligence or pervaded by one immutable Law. So the veda taught centuries ago that one is the Being that sages represent variously. This Being has no eyes, no ears, no organs of sense similar to those possessed by man, and hence the Upanishad declared that the imperishable satyam or Brahman to be worshipped by all is unthinkable and indescribable.

The popular conceptions of the minor deities have changed from time to time. The name 'Ganapati' was originally applied to Rudra, Brihaspati and other deities and finally confined to the head of the Ganas worshipped by the agriculturists and like them he was invested with features indicative of the perils to which rural life is exposed. As the doctrine of rebriths became more and more firmly established the heroes of popular stories were indentified with the previous incarnations of Buddhas by their followers, and Brahamans also started similar theories concering their deities. The Jains and the Brahmans have different versions of the same Puranic stories . Some of the old deities have ceased to be worshipped while others unknown to ancient literature have acquired wide celebrity. But across the spacious centuries and over the remains of innumerable forgotten temples comes to us the eternal reminder 'Ekam Sat' .

Science is believed to have undermined some of the most dearly cherised beliefs of mankind. For example though the gulf between matter and mind is not bridged and something may survive the body, nothing is known about the precise nature of the life after death. Hence the service of man in this world is recommended as the most practical religion that we can follow. Then again science has no reason to believe that the earnest prayers can arrest the laws of nature. They can operate only on the mind of the supplicant. As knowledge advances, our religious conceptions also change. If the Law of Nature be the God of the science, His existence requires no proof.

The object of Dharma is not accurate definition. Its aim is practical. It is intended to uphold society and promote its well-being. If we are to discharge our duties to the world in the best manner possible, we must prepare ourselves for the task by suitable training and worship is part of the necessary discipline. We worship the Supreme Being by contemplating Its or His activities in the world, by recollecting our indebetdness to nature and to society and by resolving to improve ourselves so as to discharge our obligation as fully as we can. Contemplation lifts us above the plane of sleflishness It refines character and it soothes the nerves in pain and adversity. We remember the practical aim of religion in the language which we use in worship. When we speak of God as merciful we do not presume to give the unknowable a character, but concentrate our attention on those aspects of Nature which excite our gratitude just as the hungry man thinks of food and not filth and the poet dwells on the beauties of nature, and not on ugly things. Almightiness sums up all might that is immanent in nature. All knowingness refers to the purpose of the organisation and the adaptation of means to ends that are seen everywhere. Indeed we personify the law in obedience to the instinct of reverence, not that we know the exact character of the Cosmic Intelligence. Faiths have thriven and faiths have decayed. But as long as human nature is what it is, we cannot dispense with the habit of daily contemplation.

'Tatsaviturvarenyam bhargodevasya dhimahi dhiyoyonah prachodayat.'

## ೨ ( ಬ್ರಹ್ಮಗೀತೆ)

(ಬ್ರಹ್ಮೊ ಸಮಾಜವನ್ನು ಸೇರಿದ್ದ ಹ.ನಾ. ಅವರು ಆ ಪಂಥವನ್ನು ಬಿಂಬಿಸುವ ಹಲವಾರು ಪದ್ಯಗಳನ್ನು ರಚಿಸಿದ್ದಾರೆ. 'ಕನ್ನಡ ಕೃತಿಗಳು' ಎಂಬ ಅವರು ಹೊರತಂದ ಸಂಕಲನದಿಂದ ಈ ಹಾಡನ್ನು ಆಯ್ದು ಕೊಂಡಿದೆ. ಇದಕ್ಕೆ ಅದರಲ್ಲಿ ಶೀರ್ಷಿಕೆ ಕೊಟ್ಟಿಲ್ಲ. -ಸಂ.)

ಧನ್ಯ ಸಮಯವಿದು ದೈನ್ಯದಿಂದೀಶಗ
ನನ್ನ ಶರಣನಾದೆ ನನ್ನಿಯಿಂದಲಿ
ಭಿನ್ನ ಧರ್ಮಗಳಲ್ಲಿ ಉನ್ನತೋನ್ನತನೆಂದು
ಸನ್ನುತಿ ವಡೆದನ ಮನ್ನಿಸಿ ಪೊಗಳುವೆ॥

ಉಪನಿಷತ್ತಿನ ಬ್ರಹ್ಮ ನಿಪುಣ ಪಾಲಕ ವಿಷ್ಣು
ವಿಪರೀತದ ರುದ್ರ ಅಪರಾಜಿತೆ ಶಕ್ತಿ
ಕೃಪೆಯ ಮೂರುತಿ ಬುದ್ಧ ತಪದ ಅರ್ಹನ್ನೆಂದು
ಉಪಚಾರವ ಮಾಡಿ ಜಪಿಸುವರು ಭಕ್ತರು॥

ಮೋಶೆಯ ಯೆಹೋವನ ಈಶನ ನಿಜ ತಂದೆ
ಗ್ರೀಸಿನ ಜೋಪಿತೃ ಇಸುಲಾಮರ ಅಲ್ಲಾ
ದೇಶ ದೇಶ ಜನರಾಶಿಸಿ ವಿಶ್ವಾಸಿಸಿ
ಕ್ಲೇಶಕರ ಪಾಪದ ನಾಶಕನೆಂದು ॥

# ಉಪಸಂಹಾರ

ಕ್ರಿ.ಶ. ೧೯೮೨ - ೧೯೮೫ರ ಅವಧಿಯಲ್ಲಿ ನಾನು ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಇದ್ದಾಗ, ದಕ್ಷಿಣ ಕನ್ನಡ ಜಿಲ್ಲೆಯ ಹಿರಿಯ ತಲೆಮಾರಿನ ಲೇಖಕರ ಜೀವನ ಕೃತಿಗಳನ್ನು ಕುರಿತು ಮಾಹಿತಿ ಸಂಗ್ರಹಿಸಿ ಪ್ರಕಟಿಸಬೇಕೆಂದು ಯೋಜನೆಯೊಂದನ್ನು ರೂಪಿಸಲಾಗಿತ್ತು. ಅದರನ್ವಯ ಹಟ್ಟಿಯಂಗಡಿ ನಾರಾಯಣರಾಯರು ರಚಿಸಿದ ಗ್ರಂಥ, ಲೇಖನಗಳನ್ನು ಸಂಗ್ರಹಿಸುವ ಕೆಲಸ ನಡೆಯಿತು. ಈ ಕಾರ್ಯದಲ್ಲಿ ಆಗಿನ ನಮ್ಮ ಸಹೋದ್ಯೋಗಿಯಾಗಿದ್ದ ಎಂ.ಎನ್.ವಿ. ಪಂಡಿತಾರಾಧ್ಯರು ಸಕ್ರಿಯ ಪಾಲ್ಗೊಂಡರಲ್ಲದೆ ಮುಂದೆ ಮೈಸೂರಿಗೆ ಹೋದ ಮೇಲೆ ೧೯೮೬ ರಲ್ಲಿ ಹ.ನಾ ಅವರ ದುರ್ಮಿಳವಾಗಿದ್ದ 'ಆಂಗ್ಲಕವಿತಾವಳಿ' ಯನ್ನು ಸೂಕ್ತವಾಗಿ ಸಂಪಾದಿಸಿ ಪ್ರಕಟಿಸಿದರು. ಅದರಲ್ಲಿ ಅವರು ಇಂಗ್ಲೀಷ್ ಮೂಲ ಕವನಗಳನ್ನೂ ಆರು ಅನುಬಂಧಗಳ ಮೂಲಕ ಪೂರಕ ಮಾಹಿತಿಯನ್ನೂ ಕೊಟ್ಟು ಹೊಸಗನ್ನಡದ ಆರಂಭಕಾಲದ ಕವಿತೆಯ ಸವಿವರ ವಿಮರ್ಶೆಗೆ ಅನುವು ಮಾಡಿಕೊಟ್ಟಿದ್ದಾರೆ.

ಹ.ನಾ. ಅವರ ಇತರ ಬರಹಗಳ ಅನ್ವೇಷಣೆಯಲ್ಲಿ ತೊಡಗಿದ್ದಾಗ ಸಾಹಿತ್ಯ ಅಕಾಡೆಮಿಯವರು ಈ 'ವಾಚಿಕೆಯನ್ನು' ಸಿದ್ಧಪಡಿಸಲು ಕೇಳಿದಾಗ ನನಗೆ ವಿಶೇಷ ಸಂತೋಷವಾಯಿತು. ಕೈಯಲ್ಲಿ ಎತ್ತಿಕೊಂಡಿದ್ದ ಒಂದು ಕಾರ್ಯವನ್ನು ಮುಗಿಸುವುದಕ್ಕೆ ಕಾರಣರಾದ ಬರಗೂರು ರಾಮಚಂದ್ರಪ್ಪ ಅವರನ್ನು ಮನಸಾರೆ ಅಭಿವಂದಿಸುವೆ.

ಲೇಖಕರೊಬ್ಬರ ವಾಚಿಕೆ ಎಂದಾಗ ಅವರ ಅನೇಕಾನೇಕ ಕೃತಿಗಳಲ್ಲಿ ಉತ್ತಮವಾದ ಹಾಗೂ ಅವರ ಸಾಹಿತ್ಯ ಕಾರ್ಯದ ಮಾದರಿಗಳಂತಿರುವ ಕೆಲವನ್ನು ಆಯ್ದು ಪ್ರಕಟಿಸುವುದು ವಾಡಿಕೆಯಾಗಿದೆ. ತಮ್ಮ ಆಯುಷ್ಯದ ಐದೂವರೆ ವರ್ಷಗಳನ್ನು ಮಾತ್ರ ಕನ್ನಡ ಲೇಖನ ಕಾರ್ಯಕ್ಕಾಗಿ

ವಿನಿಯೋಗಿಸಿದ್ದ, ಅವರದು ತೂಕದ ಬರವಣಿಗೆಯೂ ಆದ್ದರಿಂದ ಒಟ್ಟಿನ ಕೃತಿರಚನೆ ೧೫೦ ಪುಟಗಳಷ್ಟು ಮಾತ್ರವೇ ಇದೆ. ಅಂದಾಗ ಅವರ ಬರವಣಿಗೆಯಲ್ಲಿ ಆಯುವುದಕ್ಕಿಂತ ಉಳಿಸಿಕೊಳ್ಳುವುದೇ ಪ್ರಸ್ತುತವಾಗುತ್ತದೆ. ಅಲ್ಲದೆ, ಅವರ ಪುಸ್ತಕಗಳಾಗಲೀ ಬಿಡಿ ಬರಹಗಳಾಗಲೀ (ಪರಿಷತ್ಪತ್ರಿಕೆಯಲ್ಲಿನವನ್ನು ಬಿಟ್ಟು) ಅಲಭ್ಯವೇ ಇದ್ದಾಗ ಅವರ ಬಹ್ವಂಶದ ಬರಹಗಳನ್ನು ಈ ವಾಚಿಕೆಯಲ್ಲಿ ಸೇರಿಸಿಬೇಕಾದದ್ದು ಅನಿವಾರ್ಯ ಎನ್ನುವುದಕ್ಕಿಂತ ಅಗತ್ಯದ್ದೂ ಆಗಿದೆ.

ನಾರಾಯಣರಾಯರ ವೈಯಕ್ತಿಕ ಜೀವನದ ಹೆಚ್ಚಿನ ವಿವರಗಳನ್ನು ಅವರ ಸೋದರ ಮಗ ಎಚ್. ಶಂಕರನಾರಾಯಣರಾಯರ ಲೇಖವೊಂದರಿಂದ (೧೯೩೮ರಲ್ಲಿ ಪ್ರಕಟವಾದ ಸಾರಸ್ವತರ ಒಂದು ಸಂಸ್ಮರಣ ಸಂಚಿಕೆ) ಪಡೆಯಲಾಗಿದೆ. ಹ.ನಾ. ಅವರ ಕೊಂಕಣಿ ಪುಸ್ತಕದ ಸಾರವನ್ನು ಒದಗಿಸಿದ ಶ್ರೀ ಬಿ.ವಿ. ಬಾಳಿಗಾ (ಮಂಗಳೂರು) ಅವರನ್ನು ನೆನೆಯುತ್ತೇನೆ. ನಾರಾಯಣರಾಯರ ಛಾಯಾಚಿತ್ರವೂ ದೊರೆತಿರಲಿಲ್ಲ. ಹಳೆಯದೊಂದು ಪತ್ರಿಕಾ ಸಂಚಿಕೆಯಲ್ಲಿದ್ದ ಮಸಕು ಚಿತ್ರವೊಂದನ್ನು ಮುಂದಿಟ್ಟುಕೊಂಡು ಮಂಗಳೂರು ವಿ.ವಿ.ದ ಆಗಿನ ಹಳೆಯ ವಿದ್ಯಾರ್ಥಿಯೊಬ್ಬರು ಅಚ್ಚುಕಟ್ಟಾಗಿ ಲೇಖಿಸಿ ಕೊಟ್ಟಿದ್ದರು. (ಅವರ ಹೆಸರನ್ನು ನಾನು ಮರೆಯಬಾರದಿತ್ತು.) ಅದನ್ನೀಗ ಉಪಯೋಗಿಸಿಕೊಳ್ಳಲಾಗಿದೆ.

ಎಸ್. ಅನಂತನಾರಾಯಣರು ತಮ್ಮ 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಶ್ ಸಾಹಿತ್ಯದ ಪ್ರಭಾವ'ಎಂಬ ಉದ್ಗ್ರಂಥದಲ್ಲಿ (೧೯೬೨) ಹ.ನಾ ಅವರ ಆಂಗ್ಲ ಕಾವ್ಯನುವಾದದ ಬಗ್ಗೆ ತುಸು ಸಮಾಲೋಚನೆ ಮಾಡಿದ್ದಾರೆ. ಇನ್ನುಳಿದ ಕಡೆಗಳಲ್ಲಿ ಬಂದದ್ದು ಬರಿಯೆ ಅವರ ಕಾವ್ಯಾನುವಾದದ ಪ್ರಸ್ತಾಪ ಮಾತ್ರ. (ಅದರಂತೆ ಕರ್ನಾಟಕ-ಇದರ ಮೂಲ ಕರುನಾಡು ಎಂಬುದಾಗಿ ಸೂಚಿಸಿದ್ದ ಹಾಗೂ ಬಹುಮಟ್ಟಿಗೆ ಸ್ವೀಕೃತವಾದ ಅವರ ಸೂಚನೆಯೂ ಬರಿಯೆ ಪ್ರಸ್ತಾಪಗೊಂಡಿದ್ದಿತು.) ಇದರ ಕಾರಣ ಅವರ ಬರವಣಿಗೆಯ ದುರ್ಲಭತೆ. ಆದರೀಗ ಅವರ ಬಹ್ವಂಶದ ಬರಹಗಳು ಈ ವಾಚಿಕೆಯಲ್ಲಿ ಲಭ್ಯವಾಗಿರುವುದರಿಂದ ಅವರ ಹೆಚ್ಚಿನ ಅಭ್ಯಾಸಕ್ಕೆ ಚಾಲನೆ ದೊರೆಯುವುದೆಂದು ಆಶಿಸುವೆ.

ಪುಣೆ
ಮೇ ೧೯೯೪

ಶ್ರೀನಿವಾಸ ಹಾವನೂರ

